# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಮಾರ್ಚ್ ೧೯, ೨೦೧೫ (ಫಾಲ್ಗುಣ ೨೮, ಶಕ ವರ್ಷ ೧೯೩೬)<br>Bengaluru, Thursday, March 19, 2015 (Phalguna 28, Shaka Varsha 1936) | ಸಂಚಿಕೆ ೧೨<br>Issue 12 |
|---|---|---|


## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### K.G.F URBAN DEVELOPMENT AUTHORITY, K.G.F.

**Notification**

**S. No. KGF UDA/EST/S.R.A./C.R.-06/2014-15, Dated: 31.10.2014.**

In exercise of the powers conferred by sub-section (1) of section 72 with the previous sanction of the State Government, K.G.F. Urban Development Authority, hereby makes the following Regulations further to amend the K.G.F. Urban Development Authority (Conditions of Service) Regulations, 1994 namely:-

**1. Title and commencement:-** (1) These Regulations may be called the K.G.F. Urban Development Authority (Conditions of Service) (Amendment) Regulations, 2014.

(2) They shall come into force from the date of their publication In Official Gazette.

**2. Definitions:-** (1) In these regulations, unless the context otherwise requires-

(a) 'Act' means the Karnataka Urban Development Authorities Act, 1987 (Karnataka Act 34 of 1987) ;

(b) 'Appointing Authority' means the authority competent to make appointment under section 52 of the Act;

(c) 'Employee' means in Officer or Servant appointed by the Authority or other competent authority and includes persons absorbed in the service of the Authority;

(d) 'Schedule' means schedule appended to these regulations;

(2) All words and expressions used in these regulations but not defined shall have the same meaning assigned to them in the Karnataka Civil Service Rules, as amended from time to time.

Provided that the expressions "Government Servant(S)", "Head of the Department(S)", "the Government" or and "the Governor" wherever they occur in the regulations mentioned in regulation 4 of these regulations shall respectively mean "Employee", "Commissioner or any of his Nominee" and "Government in Urban Development, Department".

**3. Application:-** These regulations shall apply to all the persons serving in connection with the affairs of the KG.F. Urban Authority except to:-

(i) persons on casual employment;

(ii) persons in respect of whose appointment and other matters special provisions are made by or under any law for the time being in force, or in any contract;

(iii) persons subject to discharge from service on less than one month's notice; and

(iv) Government Servants deputed to the K.G.F. Urban Authority.

**4. Application of Certain Rules:- The provisions of :-**

(i) The Karnataka Civil Services Rules;

(ii) The Karnataka Civil Services (Conduct) Rules, 1957;

(iii) The Karnataka Civil Services (Seniority) Rules, 1957;

(iv) The Karnataka Civil Services (Classification) Control and Appeal) Rules, 1957;

(v) The Karnataka Civil Services (Performance) Rules, 1993;

(vi) The Karnataka Civil Services (General Recruitment) Rules, 1977;

(vii) The Karnataka Civil Services (Probation) Rules, 1977; and

(viii) The Karnataka State Civil Services (Regulation of promotion, pay and Pension) Act, 1973 and Rules, 1978;

As amended from time to time, shall mutatis mutandis be applicable to the employees, excluding persons appointed on contract basis, or on daily wages, subject to the modification specified in the Schedule I and II.

**2. Substitution of regulations 5:-** In K.G.F. Urban Development Authority (Conditions of Service) Regulations, 1994, for regulation 5, the following shall be substituted, namely:-

**"5. Salaries, Pension, Gratuity etc ... of employees :-**

Notwithstanding anything contained in any of the rules specified in regulation 4, the expenditure on account of salaries, allowances, travelling allowances, pension, gratuity etc., of the officers and servants shall debitable to the fund of the KGF Urban Development Authority"

**SCHEDULE- I**

Authority to whom an appeal lies against the order of imposition of penalties under section 52 (Appointing authorities have been specified in section 52 of the Karnataka Urban Development Authorities Act, 1987).

| Classes of Officers and Servants | Authority Competent to impose penalties | Appellate Authorities |
|---|---|---|
| Officers and Servants whose monthly salary :- | | |
| 1) does not exceed one thousand five hundred rupees | Commissioner | K.G.F. Urban Development Authority |
| 2) exceeds one thousand and five hundred rupees | Authority | Government |

**SCHEDULE - II**

**Authorities competent to sanction leave to the Authority employees are indicated below:-**

| | Categories of employees to whom leave can be sanctioned and the maximum duration the thereof | | |
|---|---|---|---|
| **Authorities competent to sanction leave** | **in the pay scale of Rs.2200-4070 and above.** | **in the pay scale of Rs.1720-3170 and below Rs.2200-4070** | **in the pay scale of Rs.780-1040 and above but below Rs.1720-3170** |
| **1** | **2** | **3** | **4** |
| Commissioner | Four months | Six months | Full powers |
| Authority | Six months | Eight months | Four months |
| Government | Full power | Full power | Full power |

**SCHEDULE - III**

Authorities competent to impose penalties under rule 8 of the Karnataka Civil Services (Classification, Central and Appeal) Rules, 1957 and the Authority to whom an appeal lies against such order of imposition of penalties. Appointing authorities have been specified in the regulations 1994 and section 52 of the Karnataka Urban Development Authorities Act, 1987.

| | Authority empowered to impose Penalties which he may impose | | |
|---|---|---|---|
| **Classes of Post** | **Authority** | **Penalties (See Rule 8 of Karnataka Civil Service (Classification Control and Appeal Rules, 1957)** | **Appellate Authorities** |
| 1 | 2 | 3 | 4 |
| I. Group-A | Government | (ii) to (viii) | ________ |
| II. Group-B | Government | (ii) to (viii) | ________ |

| | Authority empowered to impose Penalties which he may impose | | |
|---|---|---|---|
| Classes of Post | Authority | Penalties (See Rule 8 of Karnataka Civil Service (Classification Control and Appeal Rules, 1957) | Appellate Authorities |
| 1 | 2 | 3 | 4 |
| III. Group-C | Commissioner | (ii) to (iva) | Authority |
| | Authority | (v) to (viii) | Government |
| IV. Group-D | Commissioner | (i) to (iva) | Authority |
| | Commissioner | (v) to (viii) | Authority |

The categories of costs failing in the purview of Group 'A', Group '8', Group 'C' and Group 'D' are as specified in rule 5 of the Karnataka Civil Services (Classification, Control and Appeal) Rules, 1957.

**PD 118**
**SC-5**

**COMMISSIONER**
K.G.F. Urban Development Authority, K.G.F.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಬಳ್ಳಾರಿ

### ಪ್ರಕಟಣೆ

**No. EEE/MWD/AEE(O)/BLY/14-15/2025-29, Dated : 29-12-2014.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯ್ದೆ 2003ರ ಸೆಕ್ಷನ್ 67ರ ಅಡಿಯಲ್ಲಿ ಯೋಜನೆಗಳನ್ನು ರೂಪಿಸಿದೆ ಮತ್ತು ಇದೇ ಕಾಯ್ದೆ ಸೆಕ್ಷನ್ 67(2)ರನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳ ಈ ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಉದ್ದೇಶ | ಹಾದು ಹೋಗುವ ಪ್ರದೇಶ | ಅಂದಾಜು ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | ಉದ್ದೇಶಿತ 400ಕೆವಿ ಬಳ್ಳಾರಿ ಪೂಲಿಂಗ್ ಸ್ಟೇಷನ್ (ಬಿಪಿಸ್) ನಿಂದ ರಾಮಪುರದವರೆಗೆ 400ಕೆವಿ ಬಹು ವಿದ್ಯುತ್ ಪ್ರಸರಣ ಮಾರ್ಗದ ನಿರ್ಮಾಣ (Multi Circuit Line) | ಈ ಪ್ರಸರಣ ಮಾರ್ಗವನ್ನು ಉದ್ದೇಶಿತ ಯರಮರಸ್ (2X800MW) ಮತ್ತು ಎದ್ಲಾಪುರ, (1X800MW) ಬಿಟಿಪಿಸ್ (1600MW) ಹಾಗೂ JSW(1800MW) ವಿದ್ಯುತ್‌ನ್ನು ಪ್ರಸರಣ ಮಾಡುವ ಸಲುವಾಗಿ | ಹರಿಗಿನಡೋಣಿ, ಜಾನೆಕುಂಟೆ, ಜಾನೆಕುಂಟೆ ತಂಡ, ಬೆಳಗಾಲ್, ಬೆಳಗಾಲ್ ತಂಡ, ಹಲಕುಂದಿ, ಓಬಳಪುರಂ, ಹಿರೆಹಳ್, ಬೊಮ್ಮಕ್ಕನಪಲ್ಲಿ, ರಾಂಪುರ. | 400 ಕೆವಿ ಬಿಪಿಸ್–124.38 ಲಕ್ಷ. 400ಕೆವಿ ವಿದ್ಯುತ್ ಪ್ರಸರಣ ಮಾರ್ಗ–314.68 ಲಕ್ಷ |

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಭಾಗ–111 (ಕೇಂದ್ರಿಯ ಕಾಯ್ದೆ 1885ರ 13 ಅನ್ವಯ) ಅಧಿನಿಯಮ ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ. ಹಾಗೂ ಚಲಾಯಿಸುತ್ತದೆ ಸದರಿ ಯೋಜನೆಗಳಿಗೆ ಆಕ್ಷೇಪಣೆಗಳೇನಾದರು ಇದ್ದಲ್ಲಿ ನಿಗಮದ ಪರಿಗಣಿಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 2 ತಿಂಗಳವಾಗಾಗಿ ಕಾರ್ಯನಿರ್ವಾಹಕ ಅಭಿಯಂತರರು ಬೃಹತ್ ಕಾಮಗಾರಿ ವಿಭಾಗ ಕ.ವಿ.ಪ್ರ.ನಿ.ನಿ. ಬಳ್ಳಾರಿ ಇವರಿಗೆ ಲಿಖಿತ ರೂಪದಲ್ಲಿ ಸಲ್ಲಸಬೇಕಾಗಿ ವಿನಂತಿ ಹಾಗೂ ತದನಂತರ ಬರುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲವೆಂದು ಈ ಮೂಲಕ ತಿಳಿಯಪಡಿಸುತ್ತಿದ್ದೇವೆ.

**PD 129**
**SC-5**

Executive Engineer (Elec.)
K.P.T.C.L. M.W.D. Bellary.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ

### ಕಾರ್ಯನಿರ್ವಾಹಕ ಅಭಿಯಂತರರು (ವಿ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ, ಬೃಹತ್ ಕಾಮಗಾರಿ ವಿಭಾಗ, ವಿದ್ಯುತ್‌ನಗರ, ಹುಬ್ಬಳ್ಳಿ

### ಯೋಜನೆ ಪ್ರಕಟಣೆ

**No. 605/ಕಾನಿಇಂ(ವಿ)/ಬೃಕಾವಿ/ಸಕಾನಿಇಂ(ವಿ)/ಗದಗ/14–15/4945–48. ದಿನಾಂಕ : 07–01–2015.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯ್ದೆ 2003ರ ಸೆಕ್ಷನ್ 164ರಡಿಯಲ್ಲಿ ಯೋಜನೆಗಳನ್ನು ರೂಪಿಸಿದೆ ಮತ್ತು ಇದೇ ಕಾಯ್ದೆ, ಅನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳ ಈ ಕೆಳಕಂಡಂತಿವೆ.

**ಕೆಲಸದ ಹೆಸರು :** 1. ಗದಗ ಜಿಲ್ಲೆ, ಮುಂಡರಗಿ ತಾಲ್ಲೂಕಿನ ಡಂಬಳ ಹತ್ತಿರ ಡೋಣಿ ಕ್ರಾಸ್‌ದಲ್ಲಿ 400 ಕೆ.ವಿ. ವಿದ್ಯುತ್ ಕೇಂದ್ರ ಹಾಗೂ 1) ಹಾಲಿ ಇರುವ 400 ಕೆವಿ ಗುಡದಹಳ್ಳಿ ಗುತ್ತೂರ ಒಂಟಿ ವಿದ್ಯುತ್ ಮಾರ್ಗದಿಂದ ಉದ್ದೇಶಿತ 400/220ಕೆವಿ ವಿದ್ಯುತ್ ಕೇಂದ್ರ ಡೋಣಿಯವರೆಗೆ 27 ಕಿ.ಮೀ. ಉದ್ದದ ಟ್ವಿನ್ ಮೂಸ್ ಎಸಿಎಸ್‌ಆರ್ ವಾಹಕ ಜೊತೆಗೆ 400 ಕೆವಿ ಲಿಲೋ ಮಾರ್ಗ ನಿರ್ಮಾಣ.

2. ಮತ್ತು ಹಾಲಿ ಇರುವ 220 ಕೆವಿ ಗದಗ ಲಿಂಗಾಪೂರ ಜೋಡಿ ವಿದ್ಯುತ್ ಮಾರ್ಗದಿಂದ ಉದ್ದೇಶಿತ್ 400/220ಕೆವಿ ವಿದ್ಯುತ್ ಕೇಂದ್ರ ಡೋಣಿಯವರೆಗೆ 2.5 ಕಿ.ಮೀ. ಉದ್ದದ ಸಿಂಗಲ್ ಡ್ರೆಕ್ ಎ.ಸಿ.ಎಸ್.ಆರ್. ವಾಹಕದ ಜೋತೆಗೆ ಲಿಲೋ ಮಾರ್ಗ ನಿರ್ಮಿಸುವ ಬಗ್ಗೆ.

**ವಿದ್ಯುತ್ ಮಾರ್ಗದ ಉದ್ದೇಶ :** ವಿದ್ಯುತ್ ಮಾರ್ಗಗಳ ನಷ್ಟದಲ್ಲಿ ಇಳಿಕೆ, ವೋಲ್ಟೇಜ್ ಸುಧಾರಣೆಗಾಗಿ ಬೃಹತ್ ವಿದ್ಯುತ್ ಜಾಲ ನಿರ್ಮಾಣ, ಸುತ್ತಮುತ್ತಲಿನ ಪ್ರದೇಶಗಳಿಗೆ ಭವಿಷ್ಯದಲ್ಲಿನ ವಿದ್ಯುತ್ ಹೊರೆ ಸರಿದೂಗಿಸಲು ಗುಣಮಟ್ಟದ ವಿದ್ಯುತ್ ಸರಬರಾಜು ಮಾಡಲು.

**ಯೋಜನೆಯ ಅಂದಾಜು ವೆಚ್ಚ : ರೂ. 13249.27 ಲಕ್ಷಗಳು.**

**ವಿದ್ಯುತ್ ಮಾರ್ಗ ಹಾದುಹೋಗುವ ಪ್ರದೇಶಗಳು :** 1. ಕೊಪ್ಪಳ ಜಿಲ್ಲೆಯ ಹಟ್ಟಿ, ಬೆಳಗಟ್ಟಿ, ಹಾಗೂ ಮುಂಡರಗಿ ತಾಲ್ಲೂಕಿನ ಮುಂಡರಗಿ, ಬರದೂರ, ಹೈತಾಪುರಾ, ಮೇವುಂಡಿ, ಪೇತಾಲೂರ, ಡಂಬಳ ಮತ್ತು ಡೋಣಿ, 2. ಚುರ್ಚಿಹಾಳ.

**ವಿದ್ಯುತ್ ಮಾರ್ಗದ ಅಂದಾಜು ಉದ್ದ : 1. 400ಕೆವಿ ಲೈನ್ 26.79 ಕಿಮೀ.**

**2. 220 ಕೆವಿ ಲೈನ್ 2.5 ಕಿಮೀ**

ಮೇಲಿನ ಯೋಜನೆಯಲ್ಲಿ ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1885(13) ರ ಅನ್ವಯ ಟೆಲಿಗ್ರಾಫ್ ಅಧಿಕಾರಿಗಳು ಹೊಂದಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು, ಮೇಲಿನ ಯೋಜನೆಯ ಬಗ್ಗೆ ಯಾವುದೇ ಆಕ್ಷೇಪಣೆಗಳಿದ್ದಲ್ಲಿ ಸದರಿ ಪ್ರಕಟಣೆ ಪ್ರಕಟವಾದ ದಿನಾಂಕದಿಂದ 15 ದಿನದೊಳಗೆ ಕವಿಪ್ರನಿನಿ, ಅವಗಾಹನೆಗಾಗಿ ಈ ಕೆಳ ಸಹಿದಾರರ ಕಛೇರಿಗೆ ಕಳುಹಿಸುವುದು.

**PD 130**
**SC-5**

ಕಾರ್ಯನಿರ್ವಾಹಕ ಅಭಿಯಂತರರು (ವಿ),
ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ,
ಬೃಹತ್ ಕಾಮಗಾರಿ ವಿಭಾಗ, ವಿದ್ಯುತ್‌ನಗರ, ಹುಬ್ಬಳ್ಳಿ.

## ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ರಾಯಚೂರು

### ಪ್ರಕಟಣೆ

**ಕ್ರ.ಸಂ. ಕಾಅ/ಬೃಕಾವಿ/ರಾ/681-84, ದಿನಾಂಕ : 29-12-2014.**

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ವಿದ್ಯುತ್ ಸರಬರಾಜು ಕಾಯ್ದೆ 2003ರ ಸೆಕ್ಷನ್ 67ರ ಅಡಿಯಲ್ಲಿ ಯೋಜನೆಗಳನ್ನು ರೂಪಿಸಿದೆ ಮತ್ತು ಇದೇ ಕಾಯ್ದೆ ಸೆಕ್ಷನ್ 67(2)ರನ್ವಯ ಸಾರ್ವಜನಿಕರಿಗೆ ಯೋಜನೆಗಳ ಮಾಹಿತಿ ನೀಡುವ ದೃಷ್ಟಿಯಿಂದ ಈ ಪ್ರಕಟಣೆಯನ್ನು ಇಲ್ಲಿ ಪ್ರಕಟಿಸಲಾಗಿದೆ. ಯೋಜನೆಯ ವಿವರಗಳ ಈ ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಕೆಲಸದ ಹೆಸರು | ಉದ್ದೇಶ | ಹಾದು ಹೋಗುವ ಪ್ರದೇಶ | ಅಂದಾಜು ವೆಚ್ಚ (ರೂ. ಲಕ್ಷಗಳಲ್ಲಿ) |
|---|---|---|---|---|
| 1 | ಉದ್ದೇಶಿತ ವೈ.ಟಿ.ಪಿ.ಸ್. (ಯರಮರಸ್ ಉಷ್ಣ ವಿದ್ಯುತ್ ಸ್ಥಾವರ) ಜೆನರೆಟಿಂಗ್ ಸ್ಟೇಷನ್‌ನಿಂದ 400ಕೆವಿ ಬಳ್ಳಾರಿ ಪೂಲಿಂಗ್ ಸ್ಟೇಷನ್‌ವರೆಗೆ, 400ಕೆವಿ ಜೋಡಿ ವಿದ್ಯುತ್ ಪ್ರಸರಣ ಮಾರ್ಗದ ನಿರ್ಮಾಣ | ಈ ಪ್ರಸರಣ ಮಾರ್ಗವನ್ನು ಉದ್ದೇಶಿತ ಯರಮರಸ್ (2X800MVA) ಮತ್ತು ಎದ್ಲಾಪುರ, (1X800 MVA) ಬಿಟಿಪಿಸ್ ವಿದ್ಯುತ್‌ನ್ನು ಪ್ರಸರಣ ಮಾಡುವ ಸಲುವಾಗಿ, | ಮರ್ಚಡ್, ಜಾಗಿರ್ ವೆಂಕಟಾಪುರ್, ಫತ್ತೇಪುರ, ಗೋನಾಳ, ಮುರಾಂಪೂರ, ಮರಿಯಮ್ಮ ಕ್ಯಾಂಪ್, ಹುಣಶಾಳಹುಡ, ರಾಘವೇಂದ್ರ ಕ್ಯಾಂಪ್, ಕಲ್ಲೂರ, ಕುರ್ಡಿ, ಬೈಲ್ ಮರ್ಚಡ್, ಸುಂಕೇಶ್ವರ, ಮುರಾನಪುರ (ಮಾನ್ವಿ), ಸಾದಾಪುರ, ಕೊರ್ವಿ, ಮಾದ್ಲಾಪುರ, ರಂಗಧಾಳ, ಚಿಕಲ್‌ಪರ್ವಿ, ಎಡಿವಾಳ, ಅಯನೂರ, ಚಿತ್ರಹಾಲಿ, ಹೆಡಗಿನಾಳ, ವಳಬಳ್ಳಾರಿ, | 400ಕೆವಿ ವಿದ್ಯುತ್ ಪ್ರಸರಣ ಮಾರ್ಗ– 37250.12 ಲಕ್ಷ. |

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಮೇಲೆ ತಿಳಿಸಿದ ಯೋಜನೆಗಳನ್ನು ಕಾರ್ಯಗತಗೊಳಿಸಲು 1885ರ ಭಾರತೀಯ ಟೆಲಿಗ್ರಾಫ್ ಭಾಗ–III (ಕೇಂದ್ರಿಯ ಕಾಯ್ದೆ 1885ರ 13 ಅನ್ವಯ) ಅಧಿನಿಯಮ ಟೆಲಿಗ್ರಾಫ್ ಹೊಂದಿರುವ ಎಲ್ಲಾ ಅಧಿಕಾರಗಳನ್ನು ಹೊಂದಿರುತ್ತದೆ ಹಾಗೂ ಚಲಾಯಿಸುತ್ತದೆ ಸದರಿ ಯೋಜನೆಗಳಿಗೆ ಆಕ್ಷೇಪಣೇಗಳೇನಾದರು ಇದ್ದಲ್ಲಿ ನಿಗಮದ ಪರಿಗಣಿಗಾಗಿ ಆಕ್ಷೇಪಣೆಗಳನ್ನು ಈ ಪ್ರಕಟಣೆ ಪ್ರಕಟವಾದ 2

ತಿಂಗಳೊಳಗಾಗಿ ಕಾರ್ಯನಿರ್ವಾಹಕ ಅಭಿಯಂತರರು ಬೃಹತ್ ಕಾಮಗಾರಿ ವಿಭಾಗ ಕ.ವಿ.ಪ್ರ.ನಿ.ನಿ. ರಾಯಚೂರು ಇವರಿಗೆ ಲಿಖಿತ ರೂಪದಲ್ಲಿ ಸಲ್ಲಸಬೇಕಾಗಿ ವಿನಂತಿ ಹಾಗೂ ತದನಂತರ ಬರುವ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲವೆಂದು ಈ ಮೂಲಕ ತಿಳಿಯಪಡಿಸುತ್ತಿದ್ದೇವೆ.

**PD 131**
**SC-5**

ಕಾರ್ಯನಿರ್ವಾಹಕ ಅಭಿಯಂತರರು (ವಿ),
ಬೃಹತ್ ಕಾಮಗಾರಿ ವಿಭಾಗ,
ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ, ರಾಯಚೂರು.

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

## ಅಧಿಸೂಚನೆ

### ಕ್ರಮಾಂಕ : ಕಗೃಮಂ/ಭೂಸ್ವಾವಿ/ತು/55/2008–09, ದಿನಾಂಕ : 3–ಜುಲೈ 2013.

ಕರ್ನಾಟಕ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂಸ್ವಾಧೀನ ಕಾಯ್ದೆ (ಕೇಂದ್ರ ಕಾಯ್ದೆ 46)ರಲ್ಲಿ ವಿಧಿತವಾದ ಅಧಿಕಾರದಂತೆ ಹಾಗೂ ಕರ್ನಾಟಕ ಜನರಲ್ ಕ್ಲಾಜಸ್ ಆಕ್ಟ್ 1897 ಕಲಂ 21ರ ಅನ್ವಯ ಈ ಕಛೇರಿಯಿಂದ ಹೊರಡಿಸಲಾಗಿದ್ದ ಕಲಂ 4(1)ರ ಅಧಿಸೂಚನೆ ಕ್ರಮಾಂಕ : ಕಗೃಮಂ/ಭೂಸ್ವಾವಿ/ತು/55/2008–09, ದಿನಾಂಕ : 24–10–2009ರ ಅಧಿಸೂಚನೆಯು ಕರ್ನಾಟಕ ರಾಜ್ಯ ಪತ್ರದ ಭಾಗ–3 ಪುಟ 258 ರಿಂದ 267 ರವರೆಗೆ ದಿನಾಂಕ : 14–01–2010ರ ರಾಜ್ಯ ಪತ್ರದಲ್ಲಿ ಪ್ರಕಟವಾಗಿದ್ದು, ದಿನಾಂಕ : 21–07–2012ರ ಮಂಡಳಿ ಸಭೆಯ ನಿರ್ಣಯದಂತೆ, ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಊರ್ಡಿಗೆರೆ ಹೋಬಳಿ, ಬಡ್ಡಿಹಳ್ಳಿ ಗ್ರಾಮದಲ್ಲಿ ಸಂಬಂಧಪಟ್ಟ ಜಮೀನುಗಳ ಭೂಸ್ವಾಧೀನವನ್ನು ಕೈಬಿಟ್ಟು ಸದರಿ ಕಲಂ 4(1)ರ ಅಧಿಸೂಚನೆಯನ್ನು ಹಿಂತೆಗೆದುಕೊಳ್ಳಲಾಗಿದೆ.

**PD 134**
**SC-25**

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

## ಗೃಹ ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು

## ಅಧಿಸೂಚನೆ

### ಕ್ರಮಾಂಕ : ಕಗೃಮಂ/ಭೂಸ್ವಾವಿ/ತು/58/2008–09, ದಿನಾಂಕ : 3–ಜುಲೈ 2013.

ಕರ್ನಾಟಕ ಕಾಯ್ದೆ 33 ರಲ್ಲಿ ತಿದ್ದುಪಡಿಯಾದ 1894 ನೇ ಸಾಲಿನ ಭೂಸ್ವಾಧೀನ ಕಾಯ್ದೆ (ಕೇಂದ್ರ ಕಾಯ್ದೆ 46)ರಲ್ಲಿ ವಿಧಿತವಾದ ಅಧಿಕಾರದಂತೆ ಹಾಗೂ ಕರ್ನಾಟಕ ಜನರಲ್ ಕ್ಲಾಜಸ್ ಆಕ್ಟ್ 1897 ಕಲಂ 21ರ ಅನ್ವಯ ಈ ಕಛೇರಿಯಿಂದ ಹೊರಡಿಸಲಾಗಿದ್ದ ಕಲಂ 4(1)ರ ಅಧಿಸೂಚನೆ ಕ್ರಮಾಂಕ : ಕಗೃಮಂ/ಭೂಸ್ವಾವಿ/ತು/58/2008–09, ದಿನಾಂಕ : 31–10–2009ರ ಕರ್ನಾಟಕ ರಾಜ್ಯ ಪತ್ರದ ಭಾಗ–3 ಪುಟ 275 ರಿಂದ 287 ರವರೆಗೆ ದಿನಾಂಕ : 14–01–2010ರ ರಾಜ್ಯ ಪತ್ರದಲ್ಲಿ ಪ್ರಕಟವಾಗಿದ್ದು, ದಿನಾಂಕ : 21–07–2012ರ ಮಂಡಳಿ ಸಭೆಯ ನಿರ್ಣಯದಂತೆ, ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು, ಕಸಬಾ ಹೋಬಳಿ, ಮಲ್ಲಸಂದ್ರ ಗ್ರಾಮದಲ್ಲಿ ಸಂಬಂಧಪಟ್ಟ ಜಮೀನುಗಳ ಭೂಸ್ವಾಧೀನವನ್ನು ಕೈಬಿಟ್ಟು ಸದರಿ ಕಲಂ 4(1)ರ ಅಧಿಸೂಚನೆಯನ್ನು ಹಿಂತೆಗೆದುಕೊಳ್ಳಲಾಗಿದೆ.

**PD 135**
**SC-25**

ಗೃಹ ಆಯುಕ್ತರು,
ಕರ್ನಾಟಕ ಗೃಹ ಮಂಡಳಿ, ಬೆಂಗಳೂರು.

## FORM NO 151

### (See rule 315) COMPANIES ACT, 1956

### Members Voluntary Winding up

### Notice of appointment of liquidator pursuant to section 516 in Official Gazette

| | | |
|---|---|---|
| Name of Company | : | CS INDIA STEEL PRIVATE LIMITED (In Voluntary Liquidation) |
| Nature of business | : | Cutting and forming steel plates to Shipping Industry |
| Address of Registered Office | : | MADHAVA KRIPA, CAR STREET, BRAHMAYARA, UDUPI-576213. |
| Name(s) and address(es) of Liquidator(s) | : | CS Prasanna Naganur<br>No. 19, 2nd floor, Model House Street,<br>S. Kariappa Road, Basavanagudi, Bangalore-560004 |
| Date of Appointment | : | 17-12-2014 |
| By whom appointed | : | Member |

Date : 28-01-2015.
**PD 136**
**SC-5**

**For CS India Steel Pvt. Ltd. (in Liquidation)**
**Liquidator**
Name Prasanna Naganur
Designation Liquidator.

## OFFICE OF THE CITY CIVIL COURT, BENGALURU

### NOTIFICATION

**No.ADM-I (E) 88/2015, Bengaluru January 14, 2015.**

Sri R.Gurumurthy., Asst. Registrar, City Civil Court, Bengaluru is granted 13 days earned leave from 19-01-2015 to 31-01-2015 for the purpose of availing LTC, on personal ground.

Sri K. Nagaraj, Asst. Registrar, City Civil Court, Bengaluru is placed in additional charge of Sri R. Gurumurthy., Asst. Registrar, City Civil Court, Bengaluru, during the above leave period.

Sri R.Gurumurthy., Asst. Registrar, City Civil Court, Bengaluru would have continued in the same post, but for proceedings on leave.

BY ORDER OF THE PRL.CITY CIVIL&SESSIONS JUDGE,
BENGALURU
Registrar,
City Civil Court, Bengaluru

**P.R. 227**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಸಂಖ್ಯೆ: ಎ1.71ಎ.ಅಮೊ79/2010-11.ದಿನಾಂಕ: 31 ನೇ ಡಿಸೆಂಬರ್ 2014.**

**ಉಪಸ್ಥಿತರು:** ಶ್ರೀ.ಡಿ.ಎಲ್.ಗಣಪತಿ.
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಫಿರ್ಯಾದಿ:** ವನಪಾಲಕ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.
(ಪರವಾಗಿ ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಅರ್ಜಿದಾರರು.** ಇಲ್ಲಾ.

**ಪ್ರಸ್ತಾವನೆ:-**

ದಿನಾಂಕ: 09-02-2011 ರಂದು ಒಂದು ಮಾರುತಿ ಒಮ್ನಿ ವಾಹನ ನೋಂದಣಿ ಸಂಖ್ಯೆ ಕೆಎ-27-ಎನ್-9099 ರಲ್ಲಿ ಕಚ್ಚಾಹಾಲುಮಡ್ಡಿ ತುಂಬಿದ ಡಬ್ಬಗಳನ್ನು ಯಾವುದೇ ತರಹದ ರಹದಾರಿ ಇಲ್ಲದೇ ಹೊಸನಗರ ತಾಲ್ಲೂಕು ನಗರ ಹೋಬಳಿಯ ಯಡೂರು ಮಾಸ್ತಿಕಟ್ಟೆ ರಸ್ತೆಯ ಹುಲಿಕೊಪ್ಪದ ಹತ್ತಿರ ಸಾಗಿಸುತ್ತಿದ್ದಾಗ, ವನಪಾಲಕರು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಕಚ್ಚಾಹಾಲುಮಡ್ಡಿ ತುಂಬಿದ ಡಬ್ಬಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಮತ್ತು ಕಚ್ಚಾ ಹಾಲುಮಡ್ಡಿ ತುಂಬಿರುವ ಡಬ್ಬಗಳ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ 79/10-11 ನ್ನು ದಾಖಲು ಮಾಡಿಕೊಂಡು, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಅಸಾಮಿ ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಕಚ್ಚಾ ಹಾಲುಮಡ್ಡಿ ತುಂಬಿರುವ ಡಬ್ಬಗಳೊಂದಿಗೆ 1963 ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71-ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ.

ಅನಂತರ ಈ ಪ್ರಕರಣದ ವಿಚಾರಣಾ ಹಂತದಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರನ್ನು ತಿಳಿದುಕೊಳ್ಳುವ ಬಗ್ಗೆ ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳವರಲ್ಲಿ ಪತ್ರ ವ್ಯವಹರಿಸಿದ್ದು, ಮಂಗಳೂರು ಸಾರಿಗೆ ಅಧಿಕಾರಿಗಳು ವಾಹನ ನೋಂದಣಿ ಸಂಖ್ಯೆ:ಕೆಎ-27-ಎನ್-9099 ವಾಹನದ ಬಿ ವರದಿಯನ್ನು ಕಳುಹಿಸಿದ್ದು, ಸದರಿ ವರದಿಯಲ್ಲಿ ಶ್ರೀ.ಸಿರಜ್ ಅಹಮದ್ ಬಿನ್. ಜಿ.ಎಂ.ಯೂಸೂಫ್, ಐಲ್ಯಾಂಡ್ ರೆಡ್ ಎಸ್ಟೇಟ್, ಮಹೇಂದ್ರ ಅರ್ಕೆಡ, ಕರಂಗಳಪಾಡಿ, ಮಂಗಳೂರು ಇವರ ಹೆಸರಿನಲ್ಲಿರುತ್ತದೆ ಎಂಬುದಾಗಿ ತಿಳಿಸಿದ ಮೇರೆಗೆ ಸದರಿಯವರಿಗೆ ಈ ಕಚೇರಿಯಿಂದ ದಿನಾಂಕ: 26-12-2013 ರಂದು ಕಾರಣ ಕೇಳುವ ಪತ್ರವನ್ನು ಕಳುಹಿಸಿದ್ದು, ಅದಕ್ಕೆ ದಿನಾಂಕ: 08-01-2014 ರಂದು ಉತ್ತರವನ್ನು ಈ ಪ್ರಾಧಿಕಾರಕ್ಕೆ ಕಳುಹಿಸಿರುತ್ತಾರೆ. ಸದರಿ ವಾಹನವನ್ನು ತಾನು ಈಗಾಗಲೇ ಮಾರಾಟ ಮಾಡಿರುತ್ತೇನೆ, ಹಾಗೂ ಪ್ರಕರಣ ದಾಖಲು ಮಾಡಿದ ದಿನಾಂಕ: 09-11-2011 ರಂದು ಸದರಿ ವಾಹನ ತನ್ನ ಸ್ವಾಧೀನದಲ್ಲಿರಲಿಲ್ಲ ಹಾಗೂ ಪ್ರಕರಣಕ್ಕೂ ತನಗೂ ಯಾವುದೇ ರೀತಿಯ ಸಂಬಂಧವಿರುವುದಿಲ್ಲ ಹಾಗೂ ಸದರಿ ವಾಹನದ ಇತ್ತೀಚಿನ ಬಿ ವರದಿಯನ್ನು ಲಗತ್ತಿಸುತ್ತಾ ವಾಹನವು ಶ್ರೀ.ರಮೇಶ್ ಇವರ ಹೆಸರಿನಲ್ಲಿರುತ್ತದೆಂದು ಹಾಗೂ ನಿಜವಾದ ವಾರಸುದಾರರ ವಿರುದ್ಧ ಕ್ರಮಕೈಗೊಳ್ಳುವಂತೆ ಕೋರುತ್ತಾ, ಈ ಬಗ್ಗೆ ತನ್ನದೇನು ಆಕ್ಷೇಪಣೆ ಇರುವುದಿಲ್ಲ ಎಂಬುದಾಗಿ ತಿಳಿಸಿರುತ್ತಾರೆ. ಅದರಂತೆ ದಿನಾಂಕ: 22-01-2014 ಮತ್ತು 11-04-2014 ರಂತೆ ಕಾರಣ ಕೇಳುವ ಪತ್ರವನ್ನು ರಿಜಿಸ್ಟರ ಅಂಚೆ ಮುಖಾಂತರ ಶ್ರೀ.ರಮೇಶ್ ಬಿನ್.ಅರ್ಮುಗಂ, ಬೆಂಗಳೂರು ಇವರಿಗೆ ಕಳುಹಿಸಿದ್ದು, ಸದರಿ ಪತ್ರಗಳು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಮುಂದುವರದು, ವಾಹನದ ಮೇಲೆ ಮಾಲೀಕತ್ವ ಹೊಂದಿದ ಇತರೆ ವ್ಯಕ್ತಿಗಳು ಯಾರಾದರು ಇದ್ದರೆ ಹಾಜರಾಗುವಂತೆ ಪ್ರಕಟಣೆಯನ್ನು ದಿನಾಂಕ: 02-03-2011 ರ ವಿಜಯಕರ್ನಾಟಕ ಮತ್ತು ಹೊಸದಿಗಂತ ದಿನಪತ್ರಿಕೆಯಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿತ್ತು. ಮತ್ತು ಭಾಗ-3, ಪುಟ ಸಂಖ್ಯೆ-1535 ರ ಕರ್ನಾಟಕ ರಾಜ್ಯ ಪತ್ರದಲ್ಲಿಯೂ ಸಹ ಪ್ರಕಟಣೆಯನ್ನು ಪ್ರಕಟಿಸಲಾಗಿತ್ತು. ಪ್ರಕಟಣೆಯಂತೆ ವಾಹನ ಮಾಲೀಕರಾಗಲೀ ಅವರ ಪರ ವಕೀಲರಾಗಲೀ ಕ್ಲೇಮು ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ.

ಈ ಮಧ್ಯೆ ಪ್ರಕರಣದ ವಿಚಾರಣೆ ಸಮಯದಲ್ಲಿ ಅಭಿಯೋಜನಾ ಪರ ಸಾಕ್ಷಿ ಪಿಡಬ್ಲ್ಯೂ-1 ರವರನ್ನು ದಿನಾಂಕ: 10-09-2014 ರಂದು ಈ ನ್ಯಾಯಾಲಯದಲ್ಲಿ ವಿಚಾರಿಸಿಕೊಂಡಿದ್ದು, ಸಾಕ್ಷಿದಾರರಾದ ಶ್ರೀ.ಎನ್.ಪರಮೇಶ್ವರಪ್ಪ, ಉಪ ವಲಯ ಅರಣ್ಯಾಧಿಕಾರಿ, ಶ್ರೀಗಂಧದ ಕೋಠಿ, ಶಿವಮೊಗ್ಗ ಇವರು ತಮ್ಮ ಸಾಕ್ಷಿಯಲ್ಲಿ ತಾನು ಆಗಸ್ಟ್-2006 ರಿಂದ ಜುಲೈ-2012 ರವರೆಗೆ ವನಪಾಲಕನಾಗಿ ಅರಣ್ಯ ಸಂಚಾರಿ ದಳದಲ್ಲಿ ಕರ್ತವ್ಯ ನಿರ್ವಹಿಸಿದ್ದೆ.

ದಿನಾಂಕ: 09–02–2011 ರಂದು ಬಾತ್ಮಿ ಮೇರೆಗೆ ಅಧೀನ ಸಿಬ್ಬಂದಿಯವರೊಂದಿಗೆ ಗಸ್ತು ಮಾಡಿಕೊಂಡು ಮಾಸ್ತಿಕಟ್ಟೆಯಿಂದ ಯಡೂರಿಗೆ ಹೋಗುವ ರಸ್ತೆಯಲ್ಲಿ ಕಾಯುತ್ತಿರುವಾಗ ಯಡೂರು ಕಡೆಯಿಂದ ಒಂದು ಬಿಳಿ ಮಾರುತಿ ವ್ಯಾನ್ ಬರುತ್ತಿರುವುದನ್ನು ಕಂಡು ಇಲಾಖೆಯವರು ನಿಲ್ಲಿಸಲು ಸೂಚನೆ ನೀಡಿದಾಗ, ವಾಹನ ಚಾಲಕನು ಸದರಿ ವಾಹನವನ್ನು ತಿರುಗಿಸಿಕೊಂಡು ಹೋಗಿದ್ದನ್ನು ಗಮನಿಸಿ, ಸದರಿ ವಾಹನವನ್ನು ಬೆನ್ನಟ್ಟಿದಾಗ ವಾಹನವನ್ನು ದೂರದಲ್ಲಿಯೇ ಬಿಟ್ಟು ಆಸಾಮಿಗಳು ಪರಾರಿಯಾದರು, ಇಲಾಖೆಯವರು ಎಷ್ಟೆ ಬೆನ್ನಟ್ಟಿದ್ದರೂ ಸಹ ಸಿಗಲಿಲ್ಲ. ನಂತರ ವಾಹನದ ಬಳಿ ಬಂದು ಪರಿಶೀಲಿಸಿದಾಗ ವಾಹನವು ಕೆಎ–27–ಎನ್–9099 ಎಂಬುದಾಗಿದ್ದು, ವಾಹನದೊಳಗೆ 15 ಡಬ್ಬಿಗಳಲ್ಲಿ ಕಚ್ಚಾ ಹಾಲುಮಡ್ಡಿಯನ್ನು ತುಂಬಿರುವುದು ಕಂಡು ಬಂದಿತು. ಚಾಲಕ ಓಡಿಹೋಗಿರುವುದನ್ನು ಗಮನಿಸಿ ಇದು ಅಕ್ರಮವೆಂದು ಮೇಲ್ನೋಟಕ್ಕೆ ಕಂಡು ಬಂದಿದ್ದರಿಂದ, ಸದರಿ ವಾಹನ ಮತ್ತು ಕಚ್ಚಾ ಹಾಲುಮಡ್ಡಿಯನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಸ್ಥಳದಲ್ಲಿ ಪ್ರಥಮ ವರ್ತಮಾನ ವರದಿ ಮತ್ತು ಮಹಜರ್ ಕ್ರಮ ಜರುಗಿಸಿ, ಅಮೊ.79/2010/11 ದಿನಾಂಕ: 09–02–2011 ಎಂದು ದಾಖಲು ಮಾಡಿಕೊಂಡು ವಾಹನ ಮತ್ತು ಕಚ್ಚಾ ಹಾಲುಮಡ್ಡಿ ತುಂಬಿದ ಡಬ್ಬಗಳೊಂದಿಗೆ ಮುಂದಿನ ಕ್ರಮದ ಬಗ್ಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರಲ್ಲಿ ಹಾಜರ್ ಪಡಿಸಲಾಯಿತು. ಆ ದಿನ ದಾಖಲಿಸಿದ ಪ್ರಥಮ ವರ್ತಮಾನ ವರದಿಯ ಪ್ರತಿಯನ್ನು ನೋಡಿದ್ದು, ಅದನ್ನು ನಿಶಾನೆ ಪಿ1 ಅದರಲ್ಲಿರುವ ಸಾಕ್ಷಿ ಸಹಿ ನಿಶಾನೆ–ಪಿ1(ಎ) ಎಂದು ಮಹಜರನ್ನು ನಿಶಾನೆ–ಪಿ2 ಎಂದು ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ–ಪಿ2(ಎ) ಎಂದು ಜಪ್ತು ವರದಿಯನ್ನು ನಿಶಾನೆ–ಪಿ3 ಎಂದು ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ–ಪಿ3(ಎ) ಎಂದು ಗುರುತಿಸಲಾಯಿತು. ಆ ದಿನ ಜಪ್ತು ಮಾಡಿದ ವಾಹನ ಮತ್ತು ಮುದ್ದೆಮಾಲನ್ನು ನೋಡಿದರೆ ಗುರ್ತಿಸುತ್ತೇನೆ ಸಾಕ್ಷಿ ಗುರುತಿಸಿದ ವಾಹನವನ್ನು ಎಂಓ1 ಎಂದು ಒಟ್ಟು ಕಚ್ಚಾ, ಹಾಲುಮಡ್ಡಿಯ 15 ಡಬ್ಬಗಳಿಗೆ ಒಟ್ಟಿಗೆ ಎಂಓ–2 ಎಂದು ಗುರುತಿಸಲಾಗಿದೆ.

ಈ ಪ್ರಕರಣದಲ್ಲಿ ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಹಾಜರಾಗಿ ಅರ್ಜಿ ಸಲ್ಲಿಸದೆ ಇರುವುದರಿಂದ, ಪಾಟಿ ಸವಾಲು ಇಲ್ಲ ಎಂದು ತೆಗೆದುಕೊಂಡು ಏಕ ಪಕ್ಷೀಯ ನಿರ್ಣಯ ಕೈಗೊಳ್ಳಲಾಯಿತು.

ಈ ಪ್ರಕರಣದಲ್ಲಿ ವಶಪಡಿಸಿಕೊಂಡು ಕಚ್ಚಾ ಹಾಲುಮಡ್ಡಿಯು ಇನ್ನು ಹೆಚ್ಚು ದಿವಸಗಳವರೆಗೆ ಹಾಗಿಯೇ ಇಟ್ಟಲ್ಲಿ ಹಾಲುಮಡ್ಡಿಯ ಗುಣಮಟ್ಟ ಹಾಳಾಗುವ ಸಂಭವವಿರುವುದರಿಂದ, ಸದರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಸ್ವತ್ತನ್ನು ಹರಾಜಿನಲ್ಲಿ ವಿಲೇಗೊಳಿಸಿ ಬಂದಂತಹ ಮೊಬಲಗನ್ನು ಈ ಪ್ರಕರಣದ ಅಂತಿಮ ಆದೇಶವಾಗುವವರೆವಿಗೂ ಠೇವಣಿಯಾಗಿಡುವಂತೆ ದಿನಾಂಕ: 29–10–2014 ರಂದು ಆದೇಶಿಸಲಾಗಿತ್ತು. ಅದರಂತೆ, ಶ್ರೀ.ಕೆ.ಬಾಬು, ಉಪ ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಸದರಿ ಪ್ರಕರಣದಲ್ಲಿ ವಶಪಡಿಸಿಕೊಂಡ 15 ಡಬ್ಬ ಕಚ್ಚಾ ಹಾಲುಮಡ್ಡಿ 266 ಕೆಜಿಯನ್ನು ರಹದಾರಿ ನಮೂನೆ 25 ರ ಸಂಖ್ಯೆ: 308179 ದಿನಾಂಕ: 25–11–2014 ರಂದು ಆಲ್ಕೋಳ ಸರ್ಕಾರಿ ನಾಟ ಸಂಗ್ರಹಾಲಯಕ್ಕೆ ಸುರಕ್ಷತೆಗಾಗಿ ಸಾಗಾಣಿಕೆಯನ್ನು ಮಾಡಿರುತ್ತೇನೆ ಎಂಬುದಾಗಿ ದಿನಾಂಕ: 26–11–2014 ರಂದು ವರದಿ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ಅಭಿಯೋಜನಾ ಪರ ಸಾಕ್ಷಿಯನ್ನು ಸಹಾಯಕ ಅಭಿಯೋಗ ನಿರ್ದೇಶಕರು ವಿಚಾರಿಸಿಕೊಂಡು ನಿಶಾನೆಗಳನ್ನು ಗುರುತಿಸಿರುತ್ತಾರೆ. ಸಾಕ್ಷಿದಾರರು ನೀಡಿರುವ ಹೇಳಿಕೆಗೂ ಹಾಗೂ ಪಂಚನಾಮೆಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆಯಾಗಿರುತ್ತದೆ. ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅವರು ನುಡಿದ ಸಾಕ್ಷ್ಯವು ನಂಬುವಂತಾಗಿರುತ್ತದೆ. ಇದರಿಂದ ದಿನಾಂಕ: 09–02–2011 ರಂದು ಮಾರುತಿ ವ್ಯಾನ್ ವಾಹನ ನೋಂದಣಿ ಸಂಖ್ಯೆ: ಕೆಎ–27–ಎನ್–9099 ವಾಹನದಲ್ಲಿ 15 ಡಬ್ಬಗಳಲ್ಲಿ ಅಕ್ರಮವಾಗಿ ಕಚ್ಚಾ ಹಾಲುಮಡ್ಡಿಯನ್ನು ತುಂಬಿಕೊಂಡು ಸಾಗಾಣಿಕೆಯಲ್ಲಿ ನಿರತವಾಗಿರುವುದು ದೃಢಪಡುತ್ತದೆ.

ಅರ್ಜಿದಾರರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿ, ಈ ಪ್ರಾಧಿಕಾರದಲ್ಲಿ ದಿನಾಂಕ: 19–03–2014, 09–07–2014, 06–08–2014, 10–09–2014, 29–10–2014 ರಂದು ನಡೆದ ವಿಚಾರಣೆಗೆ ಹಾಜರಾಗಿ ಸಹಕರಿಸುವುದಿಲ್ಲ. ಇದರಿಂದ ಪ್ರಕರಣದ ಬಗ್ಗೆ ಅರ್ಜಿದಾರರಿಗೆ ಯಾವುದೇ ಆಸಕ್ತಿಯು ಇಲ್ಲವೆಂದು ಸ್ಪಷ್ಟವಾಗುತ್ತದೆ. ಅರಣ್ಯ ಕಾಯ್ದೆ ಸೆಕ್ಷನ್ 71–ಎ ಪ್ರಕರಣದಲ್ಲಿ ಯಾವುದೇ ವಾಹನವು ಅಕ್ರಮ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದೆ ಎಂದು ಮೇಲ್ನೋಟಕ್ಕೆ ಅಭಿಯೋಜನೆ ಸಿದ್ದಪಡಿಸಿದ ಮೇಲೆ ವಾಹನ ಮಾಲೀಕರು ತನ್ನ ತಿಳುವಳಿಕೆ ಇಲ್ಲದೇ ಅಥವಾ ತನ್ನ ಕೈ ಮೀರಿ ತಾನು ಎಲ್ಲಾ ಕಾಳಜಿ ವಹಿಸಿದ ನಂತರವೂ ಇಂತಹ ಅಪರಾಧದಲ್ಲಿ ಸಿಕ್ಕಿಹಾಕಿಕೊಂಡಿದೆ ಎಂದು ನಿಸ್ಸಂಶಯವಾಗಿ ಸಬೀತು ಪಡಿಸುವ ಸಂಪೂರ್ಣ ಬಾರ ಮಾಲೀಕರ ಮೇಲಿದ್ದು, ಮಾಲೀಕರಾಗಲೀ ಅಥವ ಸ್ವಾಧೀನ ಹೊಂದಿದವರಾಗಲೀ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ತಮ್ಮ ತಿಳುವಳಿಕೆಗೆ ಬಾರದೇ ಉಪಯೋಗಿಸಲ್ಪಟ್ಟಿದೆ ಮತ್ತು ಈ ಅಕ್ರಮ ಚಟುವಟಿಕೆಗೆ ವಾಹನವನ್ನು ಉಪಯೋಗಿಸದಂತೆ ಅವಶ್ಯವಿರುವ ಎಲ್ಲಾ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿದ್ದಾರೆಂದು ಸಾಕ್ಷ್ಯಾಧಾರದೊಂದಿಗೆ ವಾಹನ ಮಾಲೀಕರು ಸಾಭೀತು ಪಡಿಸಬೇಕಾಗಿದ್ದು, ವಾಹನ ಮಾಲೀಕರು ಈ ನಿಟ್ಟಿನಲ್ಲಿ ಸಂಪೂರ್ಣ ವಿಫಲರಾಗಿರುತ್ತಾರೆ.

ಈ ಸಂಬಂಧ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ಅರಣ್ಯ ಸಂಚಾರಿ ದಳ, ಶಿವಮೊಗ್ಗದ ವನಪಾಲಕರು ಮತ್ತು ಸಿಬ್ಬಂದಿಯವರು ಪತ್ತೆ ಹಚ್ಚಿ ಮೊಕದ್ದಮೆ ದಾಖಲು ಮಾಡಿರುತ್ತಾರೆ. ಮೊಕದ್ದಮೆ ದಾಖಲಿಸಿದ ಬಗ್ಗೆ ಪ್ರಥಮ ವರ್ತಮಾನ ವರದಿ, ಜಪ್ತಿ ವರದಿಯನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ. ಇದರಿಂದ ಈ ವಾಹನದಲ್ಲಿ ಅರಣ್ಯ ಉತ್ಪನ್ನಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುವುದರಿಂದ, ಕಾನೂನಿನ್ವಯ ಪ್ರಾಧಿಕಾರವು ಮುಂದಿನ ಕ್ರಮಕೈಗೊಳ್ಳಬಹುದೆಂದು ಮತ್ತು ಏಕಪಕ್ಷೀಯ ನಿರ್ಣಯ ಕೈಗೊಂಡು ಮುದ್ದೆಮಾಲುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ತಮ್ಮ ವಾದವನ್ನು ಮಂಡಿಸಿರುತ್ತಾರೆ.

ಅಭಿಯೋಜನಾ ಪರ ಸಾಕ್ಷ್ಯಾಧಾರವನ್ನು ಗಣನೆಗೆ ತೆಗೆದುಕೊಂಡು ದಿನಾಂಕ: 09–02–2011 ರಂದು ಸಂಖ್ಯೆ:ಕೆಎ–27–ಎನ್–9099 ವಾಹನದಲ್ಲಿ 15 ಡಬ್ಬಗಳಲ್ಲಿ ಕಚ್ಚಾ ಹಾಲುಮಡ್ಡಿಯನ್ನು ತುಂಬಿಕೊಂಡು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡಿರುವುದು ಸಂಬಂಧಪಟ್ಟ ದಾಖಲಾತಿಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಸಮಂಜಸವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ.ಡಿ.ಎಲ್.ಗಣಪತಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು, ಕರ್ನಾಟಕ ಅರಣ್ಯ ಕಾಯ್ದೆ 1963 ರ ಸೆಕ್ಷನ್ 71–ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ ಓಮಿನಿ ನೋಂದಣಿ ಸಂಖ್ಯೆ:ಕೆಎ–27–ಎನ್–9099 ಇಂಜಿನ್ ಸಂಖ್ಯೆ.ಎಫ್.8.ಬಿಐಎನ್.2661860 ಛಾಸ್ಸಿ ಸಂಖ್ಯೆ: ಎಸ್‌ಟಿ.91ಐಎನ್.255722 ಮತ್ತು ಕಚ್ಚಾ ಹಾಲುಮಡ್ಡಿ ತುಂಬಿರುವ 15 ಡಬ್ಬ 266 ಕೆಜಿಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ಮುದ್ದೆಮಾಲುಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಮುದ್ದೆಮಾಲುಗಳು ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ: 31–12–2014 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ: 31–12–2014 ರಂದು ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಮುದ್ರಿಸಿ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಿ ಅನಂತರ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಡಿ.ಎಲ್.ಗಣಪತಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಅನುಬಂಧ**

**ಪಿರ್ಯಾದಿದಾರರ ಪರ ಸಾಕ್ಷಿಗಳ ವಿಚಾರಣೆ :**

1. ಶ್ರೀ ಪರಮೇಶ್ವರಪ್ಪ, ಉಪ ವಲಯ ಅರಣ್ಯಾಧಿಕಾರಿ – ಪಿ.ಡಬ್ಲ್ಯೂ –1

**ಪಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ :**

1. ಪ್ರಥಮ ವರ್ತಮಾನ ವರದಿ – ನಿಶಾನೆ–1.
2. ಸ್ಥಳ ಮಹಜರ್ – ನಿಶಾನೆ –2.
3. ಅಮಾನತ್ತು ವರದಿ – ನಿಶಾನೆ – 3.
4. ಕೆಎ–27–ಎನ್–9099 ಮಾರುತಿ ಓಮಿನಿ ವ್ಯಾನ್ – ಎಂಒ –1
5. ಕಚ್ಚಾ ಹಾಲುಮಡ್ಡಿ ತುಂಬಿದ ಡಬ್ಬ 15=266 ಕೆ.ಜಿ – ಎಂಒ –2

**ಅರ್ಜಿದಾರರ ಪರ ಸಾಕ್ಷಿಯ ವಿಚಾರಣೆ ಮತ್ತು ದಾಖಲಾತಿಗಳ ಪರಿಶೀಲನೆ :** ಯಾವುದು ಇರುವುದಿಲ್ಲ.

**P.R. 229**

**ಡಿ.ಎಲ್.ಗಣಪತಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆರ್‌ಡಿ 138 ಎಲ್‌ಜಿಎ2014 ಬೆಂಗಳೂರು, ದಿನಾಂಕ: 30–12–2014.**

**ನಮೂನೆ – 27**

**ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68(1) ಮತ್ತು ನಿಯಮ 94 ರನ್ವಯ ಘೋಷಣೆ**

ಸರ್ಕಾರದ ಸ್ವತ್ತಾಗಿರುವ ಹಾಗೂ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟ ಪಡಿಸಿದ ಸರ್ಕಾರಿ ಹೊಳೆ ಪೊರಂಬೋಕು ಭಾಗವು ಸಾರ್ವಜನಿಕ ಉಪಯೋಗಕ್ಕೆ ಅಗತ್ಯವಿಲ್ಲವೆಂದು ರಾಜ್ಯ ಸರ್ಕಾರಕ್ಕೆ ಕಂಡು ಬಂದಿರುವುದರಿಂದ,

ಈಗ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಕಲಂ 68ನೇ ಪ್ರಕರಣದ (1)ನೇ ಉಪಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸರ್ಕಾರಿ ಹೊಳೆ ಪೊರಂಬೋಕು ಭಾಗವು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಪರಿಗಣಿಸಿ, ಬಹುಗ್ರಾಮ ನೀರು ಸರಬರಾಜು ಯೋಜನೆಗೆ ಜಮೀನನ್ನು ಕಾದಿರಿಸಲು ಉದ್ದೇಶಿಸಲಾಗಿರುವುದರಿಂದ ಸರ್ಕಾರಿ ಹೊಳೆ ಪೊರಂಬೋಕಿನ ಸದರಿ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಈ ಮೂಲಕ ಘೋಷಿಸುತ್ತದೆ.

ಸರ್ಕಾರಿ ಹೊಳೆ ಪೊರಂಬೋಕು ಭಾಗದಲ್ಲಿ ಅಥವಾ ಅದರ ಮೇಲೆ ಹಿತಾಸಕ್ತಿಯುಳ್ಳ ಅಥವಾ ಹಕ್ಕುಳ್ಳ ಅಥವಾ ಈ ಉದ್ದೇಶದಿಂದ ಪ್ರತಿಕೂಲ ಪರಿಣಾಮಕ್ಕೆ ಒಳಗಾಗುವ ಸಂಭವವಿರುವ ಇತರೆ ಯಾವುದೇ ಹಿತಾಸಕ್ತಿಯನ್ನು ಹೊಂದಿರುವ ಯಾವುದೇ ಸಾರ್ವಜನಿಕರ ಅಥವಾ ಯಾವುದೇ ವ್ಯಕ್ತಿಯು ಈ ಅಧಿಸೂಚನೆಯನ್ನು ಹೊರಡಿಸಿದ ತೊಂಭತ್ತು (90) ದಿನಗಳೊಳಗೆ ಸದರಿ ಉದ್ದೇಶದ ಬಗ್ಗೆ ತಮ್ಮ ಆಕ್ಷೇಪಣೆಗಳನ್ನು ಅಂತಹ ಹಿತಾಸಕ್ತಿಯು ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂತಹ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕೆ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಜಿಲ್ಲೆಯ ಜಿಲ್ಲಾಧಿಕಾರಿಗೆ ಬರಹದಲ್ಲಿ ತಿಳಿಸತಕ್ಕದ್ದು ಮತ್ತು ಸದರಿ ಆಕ್ಷೇಪಣೆಗಳನ್ನು ಮತ್ತು ಕ್ಲೇಮುಗಳನ್ನು ಸದರಿ ಪ್ರಕರಣದಲ್ಲಿ ಉಪಬಂಧಿಸಿರುವಂತೆ ಜಿಲ್ಲಾಧಿಕಾರಿಯವರು ಪರಿಶೀಲಿಸತಕ್ಕದ್ದು.

**ಅನುಸೂಚಿ**

| | |
|---|---|
| ಸರ್ಕಾರಿ ಹೊಳೆ ಪೊರಂಬೋಕು ಇತ್ಯಾದಿ ಇರುವ ಗ್ರಾಮ | ಸಂಗಬೆಟ್ಟು |
| ತಾಲ್ಲೂಕು | ಬಂಟ್ವಾಳ |
| ಜಿಲ್ಲೆ | ದಕ್ಷಿಣ ಕನ್ನಡ |
| ಸರ್ಕಾರಿ ಹೊಳೆ ಪೊರಂಬೋಕು ಮೊದಲಾದುದರ ಭಾಗದ ವರ್ಣನೆ | ಸರ್ವೆ ನಂ. 96 |
| ಸರ್ಕಾರಿ ಹೊಳೆ ಪೊರಂಬೋಕು ಭಾಗದ ಸದರಿ ಸುಮಾರು ವಿಸ್ತೀರ್ಣ | 0.15 ಎಕರೆ |
| **ಮೇರೆ** | |
| ಪೂರ್ವ | ಸ.ನಂ.355/2ಎ, 353/1 ಇದರ ಸ.ಡಿ. ಲೈನು |
| ದಕ್ಷಿಣ | ಇದೇ ಸರ್ವೆ ನಂಬರ್‌ನ ಅಂಶ |
| ಪಶ್ಚಿಮ | ಇದೇ ಸರ್ವೆ ನಂಬರ್‌ನ ಅಂಶ (ಮಂಗಳಾದೇವಿ ದೇವಸ್ಥಾನ ರಸ್ತೆ) |
| ಉತ್ತರ | ಇದೇ ಸರ್ವೆ ನಂಬರ್‌ನ ಅಂಶ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಉದಯ ಆರ್. ನಾಯಕ್**
ಪೀಠಾಧಿಕಾರಿ,
ಕಂದಾಯ ಇಲಾಖೆ (ಭೂ.ಮಂ–2)

**P.R. 244**
**SC - 50**

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1; ಅಲಿ ಆಸ್ಕರ್ ರಸ್ತೆ. ಬೆಂಗಳೂರು – 52 ಇವರ ನ್ಯಾಯಾಲಯ,**

**ದಾವಾ ಸಂಖ್ಯೆ: ಆರ್‌ಸಿಎಸ್ / ಡಿ–4/ಡಿಐಎಸ್/ಸೌಹಾರ್ದ್/687/2014–15.**

| ವಾದಿ | ಪ್ರತಿವಾದಿಗಳು |
|---|---|
| ಶ್ರೀಕಾಂತ್, ವಿಶೇಷಾಧಿಕಾರಿ. ಶ್ರೀ ಶಕ್ತಿ ಕ್ರೆಡಿಟ್ ಸೌಹಾರ್ದ ಸಹಕಾರಿ ನಿ, ಕಛೇರಿ :#20, 8ನೇ ಮುಖ್ಯ ರಸ್ತೆ, 8ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–03<br><br>**ವಿಳಾಸ**<br>ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ ನಿಯಮಿತ, ನಿರ್ಮಾಣ ಭವನ,<br>ಡಾ: ರಾಜ್ ಕುಮಾರ್ ರಸ್ತೆ, 1ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10. | 1) ಶ್ರೀಮತಿ ಅನ್ನಪೂರ್ಣ, ಮನೆ ನಂ.23, 4ನೇ ಎ ಕ್ರಾಸ್, ಹಂಪಿನಗರ, ಆರ್ ಪಿ ಸಿ ಲೇಔಟ್, ಬೆಂಗಳೂರು.<br>2) ಶ್ರೀ ಶ್ರೀಧರ್ .ವಿ.<br>ಮನೆ ನಂ:16, 1ನೇ ಮೈನ್, ವಿ. ಆರ್. ಗಾರ್ಡನ್, ಯಶವಂತಪುರ, ಬೆಂಗಳೂರು.<br>3) ಶ್ರೀಮತಿ ಜೆ. ಶಿವಗಾಮಿ, ನಂ. 4 ಡಿಸಿ –111, ಎನ್ ಜಿ ಇ ಎಫ್ ಲೇಔಟ್ ಈಸ್ಟ್, ಕಸ್ತೂರಿನಗರ, ಬೆನ್ನಿಗಾನಹಳ್ಳಿ, ಬೆಂಗಳೂರು.<br>4) ಶ್ರೀ ಸುನಿಲ್ ಕುಮಾರ್ ಜೆ.ಕೆ.<br>ನಂ. 171/1, 6 ನೇ ಕ್ರಾಸ್, 8ನೇ ಮೈನ್, ಮಲ್ಲೇಶ್ವರಂ, ಬೆಂಗಳೂರು–03 |

ವಾದಿಯು ಈ ದಾವೆಯನ್ನು ಪ್ರತಿವಾದಿಗಳ ವಿರುದ್ದ ದಾಖಲಿಸಿ ಷೆಡ್ಯುಲ್ ಸ್ವತ್ತುಗಳನ್ನು ವಾದಿಯ ಹೆಸರಿಗೆ ವರ್ಗಾಯಿಸಲು ಪ್ರತಿವಾದಿಗಳಿಗೆ ನಿರ್ದೇಶನ ನೀಡಲು ಕೋರಿರುತ್ತಾರೆ. ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿದ್ದು, ಅರ್ಜಿದಾರರು ತಮ್ಮ ಅರ್ಜಿಯಲ್ಲಿ ವಾದಿ ಸಂಘದ ಆಡಳಿತ ಮಂಡಳಿಯನ್ನು ರದ್ದುಪಡಿಸಿದ್ದು, ಪ್ರತಿವಾದಿಗಳು ರದ್ದತಿಯಾದ ಆಡಳಿತ ಮಂಡಳಿಯ ಸದಸ್ಯರಾಗಿದ್ದು, ಪ್ರತಿವಾದಿಗಳು ಸಂಘದ ನಿಧಿಗಳಿಂದ ಷೆಡ್ಯುಲ್ ಸ್ವತ್ತುಗಳನ್ನು ಖರೀದಿಸಿದ್ದಾರೆಂದು ಅರ್ಜಿದಾರರು ಹೇಳಿರುತ್ತಾರೆ. ಹೀಗೆ ಖರೀದಿಸಿದ ಸದರಿ ಸ್ವತ್ತುಗಳನ್ನು ಸಂಘದ ವಶಕ್ಕೆ ನೀಡದೇ ಇದ್ದ ಕಾರಣ ವಿಶೇಷಾಧಿಕಾರಿಗಳು ಸಂಘದ ಸ್ವತ್ತುಗಳನ್ನು ಕಾಪಾಡಲು ಷೆಡ್ಯುಲ್ ಸ್ವತ್ತುಗಳನ್ನು ಅರ್ಜಿದಾರರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗಳಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿದ್ದಾರೆಂದು ಹೇಳಿರುತ್ತಾರೆ. ಷೆಡ್ಯುಲ್ ಸ್ವತ್ತುಗಳನ್ನು ಪ್ರತಿವಾದಿಗಳು ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ.

**ನೋಟೀಸ್**

**<u>ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ</u>**

ಅರ್ಜಿದಾರರ ಅರ್ಜಿಯನ್ನು ಪರಿಗಣಿಸಿದೆ, ಪ್ರತಿವಾದಿಗಳು ಈ ಕೆಳಕಂಡ ಷೆಡ್ಯುಲ್ ಸ್ವತ್ತುಗಳನ್ನು ಪರಭಾರೆ ಮಾಡದಂತೆ, ಕಲಂ 44(1)ರಂತೆ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ ಮಾಡಿ ಆದೇಶಿಸಿದೆ. ಈ ಆದೇಶದ ಬಗ್ಗೆ ಪ್ರತಿವಾದಿಗಳು ಆಕ್ಷೇಪಣೆ / ವಿವರಣೆ ಸಲ್ಲಿಸಲು ಉದ್ದೇಶಿಸಿದಲ್ಲಿ ಈ ಆದೇಶವನ್ನು ಪಡೆದ ಒಂದು ತಿಂಗಳೊಳಗೆ ಆಕ್ಷೇಪಣೆ / ವಿವರಣೆ ಸಲ್ಲಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

**<u>ಷೆಡ್ಯೂಲ್ ಸ್ವತ್ತು :–</u>**

**<u>ಸ್ಥಿರಾಸ್ತಿ:</u>**

1) ಒಂದನೇ ಪ್ರತಿವಾದಿಯ ಹೆಸರಿನಲ್ಲಿರುವ ಬೆಂಗಳೂರು ಮಹಾನಗರ ಪಾಲಿಕೆ ಖಾತೆ ನಂ.23, ಆಸ್ತಿ ಗುರುತಿನ ಸಂಖ್ಯೆ 34–50–23, ಆರ್ ಪಿ ಸಿ ಲೇಔಟ್ ವಾರ್ಡ್ ನಂ.34, 4ನೇ ಎ ಕ್ರಾಸ್, ಹಂಪಿನಗರ, ಆರ್ ಪಿ ಸಿ ಲೇಔಟ್, ಬೆಂಗಳೂರು ರಲ್ಲಿನ ಒಟ್ಟು 2800 ಚದರಡಿಯ ನಿವೇಶನ.

2) ಎರಡನೇ ಪ್ರತಿವಾದಿಯ ಹೆಸರಿನಲ್ಲಿರುವ ಬೆಂಗಳೂರು ಮಹಾನಗರ ಪಾಲಿಕೆ ಖಾತೆ ನಂ.16, ಯಶವಂತಪುರ ವಾರ್ಡ್ ನಂ.3, 1ನೇಮೈನ್ ರೋಡ್, ವಿ. ಆರ್. ಗಾರ್ಡನ್, ಯಶವಂತಪುರ, ಬೆಂಗಳೂರು ರಲ್ಲಿನ ನಿವೇಶನದ ಅಳತೆ 780 ಚದರಡಿ ಕಟ್ಟಡದ ಅಳತೆ 900 ಚದರಡಿ

3) ಮೂರನೇ ಪ್ರತಿವಾದಿಯ ಹೆಸರಿನಲ್ಲಿರುವ ಬೆಂಗಳೂರು ಮಹಾನಗರ ಪಾಲಿಕೆ ಖಾತೆ ನಂ. 4 ಡಿಸಿ –111,, ಆಸ್ತಿ ಗುರುತಿನ ಸಂಖ್ಯೆ 84–138–4 ಡಿಸಿ –111, ಬೆನ್ನಿಗಾನಹಳ್ಳಿ ವಾರ್ಡ್ ನಂ.84,, ಎನ್ ಜಿ ಇ ಎಫ್ ಲೇಔಟ್ ಈಸ್ಟ್, ಕಸ್ತೂರಿನಗರ, ಬೆನ್ನಿಗಾನಹಳ್ಳಿ, ಬೆಂಗಳೂರು ರಲ್ಲಿನ ಒಟ್ಟು 750.46 ಚದರಡಿಯ ನಿವೇಶನ.

4) ನಾಲ್ಕನೇ ಪ್ರತಿವಾದಿಯ ಹೆಸರಿನಲ್ಲಿರುವ ಸರ್ವೆ ನಂ. 1/1, ಕುಪ್ಪೂರು ಗ್ರಾಮ, ಕಸಬಾ ಹೋಬಳಿ, ಮೈಸೂರು ತಾಲ್ಲೂಕು ಮತ್ತು ಜಿಲ್ಲೆ ರಲ್ಲಿನ 1080 ಚದರಡಿ ಅಳತೆ ನಿವೇಶನ ಸಂಖ್ಯೆ –4 ರಲ್ಲಿನ ಕಟ್ಟಡ.

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 11–12–2014 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

P.R. 242
SC - 05

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1; ಅಲಿ ಆಸ್ಕರ್ ರಸ್ತೆ. ಬೆಂಗಳೂರು – 52 ಇವರ ನ್ಯಾಯಾಲಯ,**

**ದಾವಾ ಸಂಖ್ಯೆ: ಆರ್‌ಸಿಎಸ್ /ಡಿ–4/ಡಿಐಎಸ್/ಸೌಹಾರ್ದ್/688/2014–15.**

| ವಾದಿ | ಪ್ರತಿವಾದಿಗಳು |
|---|---|
| ಶ್ರೀಕಾಂತ್, ವಿಶೇಷಾಧಿಕಾರಿ.<br>ಶ್ರೀ ಶಕ್ತಿ ಕ್ರೆಡಿಟ್ ಸೌಹಾರ್ದ ಸಹಕಾರಿ ನಿ, ಕಛೇರಿ :#20, 8ನೇ ಮುಖ್ಯ ರಸ್ತೆ, 8ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–03<br><br>**ವಿಳಾಸ**<br>ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ ನಿಯಮಿತ, ನಿರ್ಮಾಣ ಭವನ,<br>ಡಾ: ರಾಜ್ ಕುಮಾರ್ ರಸ್ತೆ, 1ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10. | 1) ಶ್ರೀ ಎ.ಎನ್.ಕುಮಾರ್.<br>ತಂದೆ. ಅಶ್ವಥನಾರಾಯಣ,<br>ಮನೆ ನಂ:171/1, 6ನೇಕ್ರಾಸ್, 8ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03.<br>2) ಲಕ್ಷ್ಮೀ .ಕೆ.<br>ಕೋಂ ಎ.ಎನ್.ಕುಮಾರ್.<br>ಮನೆ ನಂ:171/1, 6ನೇ ಕ್ರಾಸ್, 8ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03. |

ವಾದಿಯು ಈ ದಾವೆಯನ್ನು ಪ್ರತಿವಾದಿಗಳ ವಿರುದ್ದ ದಾಖಲಿಸಿ ಷೆಡ್ಯುಲ್ ಸ್ವತ್ತುಗಳನ್ನು ವಾದಿಯ ಹೆಸರಿಗೆ ವರ್ಗಾಯಿಸಲು ಪ್ರತಿವಾದಿಗಳಿಗೆ ನಿರ್ದೇಶನ ನೀಡಲು ಕೋರಿರುತ್ತಾರೆ. ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿದ್ದು, ಅರ್ಜಿದಾರರು ತಮ್ಮ ಅರ್ಜಿಯಲ್ಲಿ ವಾದಿ ಸಂಘದ ಆಡಳಿತ ಮಂಡಳಿಯನ್ನು ರದ್ದುಪಡಿಸಿದ್ದು, ಪ್ರತಿವಾದಿಗಳು ರದ್ದತಿಯಾದ ಆಡಳಿತ ಮಂಡಳಿಯ ಸದಸ್ಯರಾಗಿದ್ದು, ಪ್ರತಿವಾದಿಗಳು ಸಂಘದ ನಿಧಿಗಳಿಂದ ಷೆಡ್ಯುಲ್ ಸ್ವತ್ತುಗಳನ್ನು ಖರೀದಿಸಿದ್ದಾರೆಂದು ಅರ್ಜಿದಾರರು ಹೇಳಿರುತ್ತಾರೆ. ಹೀಗೆ ಖರೀದಿಸಿದ ಸದರಿ ಸ್ವತ್ತುಗಳನ್ನು ಸಂಘದ ವಶಕ್ಕೆ ನೀಡದೇ ಇದ್ದ ಕಾರಣ ವಿಶೇಷಾಧಿಕಾರಿಗಳು ಸಂಘದ ಸ್ವತ್ತುಗಳನ್ನು ಕಾಪಾಡಲು ಷೆಡ್ಯುಲ್ ಸ್ವತ್ತುಗಳನ್ನು ಅರ್ಜಿದಾರರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗಳಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿದ್ದಾರೆಂದು ಹೇಳಿರುತ್ತಾರೆ. ಷೆಡ್ಯುಲ್ ಸ್ವತ್ತುಗಳನ್ನು ಪ್ರತಿವಾದಿಗಳು ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ.

**<u>ನೋಟೀಸ್</u>**

**<u>ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ</u>**

ಅರ್ಜಿದಾರರ ಅರ್ಜಿಯನ್ನು ಪರಿಗಣಿಸಿದೆ, ಪ್ರತಿವಾದಿಗಳು ಈ ಕೆಳಕಂಡ ಷೆಡ್ಯುಲ್ ಸ್ವತ್ತುಗಳನ್ನು ಪರಭಾರೆ ಮಾಡದಂತೆ, ಕಲಂ 44(1)ರಂತೆ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ ಮಾಡಿ ಆದೇಶಿಸಿದೆ. ಈ ಆದೇಶದ ಬಗ್ಗೆ ಪ್ರತಿವಾದಿಗಳು ಆಕ್ಷೇಪಣೆ / ವಿವರಣೆ ಸಲ್ಲಿಸಲು ಉದ್ದೇಶಿಸಿದಲ್ಲಿ ಈ ಆದೇಶವನ್ನು ಪಡೆದ ಒಂದು ತಿಂಗಳೊಳಗೆ ಆಕ್ಷೇಪಣೆ / ವಿವರಣೆ ಸಲ್ಲಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

**<u>ಷೆಡ್ಯೂಲ್ ಸ್ವತ್ತು :–</u>**

**<u>ಸ್ಥಿರಾಸ್ತಿ:</u>**

| ಕ್ರಸಂ | ಗ್ರಾಮದ ಹೆಸರು | ಸರ್ವೆ ಸಂಖ್ಯೆ | ವಿಸ್ತೀರ್ಣ | ಚಕ್ಕು ಬಂದಿ |
|---|---|---|---|---|
| 1 | ದೊಮ್ಮಸಂದ್ರ ಗ್ರಾಮ, ಸರ್ಜಾಪುರ ಹೋಬಳಿ, ಆನೇಕಲ್ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ. | 1) ಸರ್ವೆ ನಂ: 151/2<br><br>2) ಸರ್ವೆ ನಂ: 152/2 | 1) 5 ಗುಂಟೆ ಜಮೀನು (ಫಾರ್ಮ್ಂ ಹೌಸ್ ನಂ.36)<br><br>2) 1/2 ಗುಂಟೆ ಜಮೀನು | ಪೂರ್ವ : ಫಾರ್ಮ್ಂ ಹೌಸ್ ನಂ.37<br>ಪಶ್ಚಿಮ : ಫಾರ್ಮ್ಂ ಹೌಸ್ ನಂ.35<br>ಉತ್ತರ : ಸರ್ವೆನಂ: 152/2<br>ದಕ್ಷಿಣ : ರಸ್ತೆ, |

<u>2.</u> ಎರಡನೇ ಪ್ರತಿವಾದಿಯ ಹೆಸರಿನಲ್ಲಿರುವ ಮುನಿಸಿಪಲ್ ಖಾತೆ ನಂ.6/1, ಆಸ್ತಿ ಗುರುತಿನ ಸಂಖ್ಯೆ 7–6–6/1, 7ನೇಕ್ರಸ್, 7ನೇ ಮುಖ್ಯ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03 ವಾರ್ಡ ನಂ.7 ರಲ್ಲಿ ಒಟ್ಟು 985 ಚದರಡಿಯ ನಿವೇಶನದಲ್ಲಿ ನಿರ್ಮಿಸಿರುವ ಕಟ್ಟಡ.

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 11–12–2014 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ನೀಡಲಾಗಿದೆ.

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

**P.R. 239**
**SC - 05**

**ಸಹಕಾರ ಸಂಘಗಳ ನಿಬಂಧಕರು, ಕರ್ನಾಟಕ ರಾಜ್ಯ, ನಂ.1; ಅಲಿ ಆಸ್ಕರ್ ರಸ್ತೆ. ಬೆಂಗಳೂರು – 52 ಇವರ ನ್ಯಾಯಾಲಯ,**

**ದಾವಾ ಸಂಖ್ಯೆ: ಆರ್‌ಸಿಎಸ್ /ಡಿ–4/ಡಿಐಎಸ್/ಸೌಹಾರ್ದ್/686/2014–15.**

| ವಾದಿ | ಪ್ರತಿವಾದಿಗಳು |
|---|---|
| ಶ್ರೀಕಾಂತ್, ವಿಶೇಷಾಧಿಕಾರಿ.<br>ಶ್ರೀ ಶಕ್ತಿ ಕ್ರೆಡಿಟ್ ಸೌಹಾರ್ದ ಸಹಕಾರಿ ನಿ, ಕಛೇರಿ :#20, 8ನೇ ಮುಖ್ಯ ರಸ್ತೆ, 8ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು–03<br><br>ವಿಳಾಸ<br>ಕರ್ನಾಟಕ ರಾಜ್ಯ ಸೌಹಾರ್ದ ಸಂಯುಕ್ತ ಸಹಕಾರಿ ನಿಯಮಿತ, ನಿರ್ಮಾಣ ಭವನ, ಡಾ: ರಾಜ್ ಕುಮಾರ್ ರಸ್ತೆ, 1ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–10. | ಶ್ರೀ ಪ್ರಕಾಶ್ . ಪಿ.,<br>ಮನೆ ನಂ:498, ರಾಷ್ಟ್ರಕವಿ ಕುವೆಂಪುನಗರ, 1ನೇ ಘಟ್ಟ 2ನೇ ಹಂತ, ಬಿ ಟಿ ಎಂ ಲೇಔಟ್, ಬೆಂಗಳೂರು |

ವಾದಿಯು ಈ ದಾವೆಯನ್ನು ಪ್ರತಿವಾದಿಗಳ ವಿರುದ್ಧ ದಾಖಲಿಸಿ ಷೆಡ್ಯುಲ್ ಸ್ವತ್ತುಗಳನ್ನು ವಾದಿಯ ಹೆಸರಿಗೆ ವರ್ಗಾಯಿಸಲು ಪ್ರತಿವಾದಿಗಳಿಗೆ ನಿರ್ದೇಶನ ನೀಡಲು ಕೋರಿರುತ್ತಾರೆ. ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿ ಅರ್ಜಿ ಸಲ್ಲಿಸಿದ್ದು, ಅರ್ಜಿದಾರರು ತಮ್ಮ ಅರ್ಜಿಯಲ್ಲಿ ವಾದಿ ಸಂಘದ ಆಡಳಿತ ಮಂಡಳಿಯನ್ನು ರದ್ದುಪಡಿಸಿದ್ದು, ಪ್ರತಿವಾದಿಗಳು ರದ್ದತಿಯಾದ ಆಡಳಿತ ಮಂಡಳಿಯ ಸದಸ್ಯರಾಗಿದ್ದು, ಪ್ರತಿವಾದಿಗಳು ಸಂಘದ ನಿಧಿಗಳಿಂದ ಷೆಡ್ಯುಲ್ ಸ್ವತ್ತುಗಳನ್ನು ಖರೀದಿಸಿದ್ದಾರೆಂದು ಅರ್ಜಿದಾರರು ಹೇಳಿರುತ್ತಾರೆ. ಹೀಗೆ ಖರೀದಿಸಿದ ಸದರಿ ಸ್ವತ್ತುಗಳನ್ನು ಸಂಘದ ವಶಕ್ಕೆ ನೀಡದೇ ಇದ್ದ ಕಾರಣ ವಿಶೇಷಾಧಿಕಾರಿಗಳು ಸಂಘದ ಸ್ವತ್ತುಗಳನ್ನು ಕಾಪಾಡಲು ಷೆಡ್ಯುಲ್ ಸ್ವತ್ತುಗಳನ್ನು ಅರ್ಜಿದಾರರ ಸಂಸ್ಥೆಗೆ ವರ್ಗಾಯಿಸಲು ಪ್ರತಿವಾದಿಗಳಿಗೆ ನಿರ್ದೇಶನ ನೀಡಲು ಕೋರಿ ದಾವೆ ಹೂಡಿದ್ದಾರೆಂದು ಹೇಳಿರುತ್ತಾರೆ. ಷೆಡ್ಯುಲ್ ಸ್ವತ್ತುಗಳನ್ನು ಪ್ರತಿವಾದಿಗಳು ಪರಭಾರೆ ಮಾಡಿದಲ್ಲಿ ಮುಂದೆ ದಾವೆಯನ್ನು ಪರಿಗಣಿಸಿ ಆದೇಶ ಹೊರಡಿಸಿದರೂ ಅದು ನಿರರ್ಥಕವಾಗುವುದಾಗಿ ಹೇಳಿ ಕಲಂ 44ರಡಿ ತೀರ್ಪು ಪೂರ್ವ ಜಪ್ತಿ ಆದೇಶ ಹೊರಡಿಸಲು ಕೋರಿರುತ್ತಾರೆ.

**ನೋಟೀಸ್**

**ಸೌಹಾರ್ದ ಸಹಕಾರಿ ಕಾಯ್ದೆ ಕಲಂ 44ರಡಿ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ**

ಅರ್ಜಿದಾರರ ಅರ್ಜಿಯನ್ನು ಪರಿಗಣಿಸಿದೆ, ಪ್ರತಿವಾದಿಗಳು ಈ ಕೆಳಕಂಡ ಷೆಡ್ಯುಲ್ ಸ್ವತ್ತುಗಳನ್ನು ಪರಭಾರೆ ಮಾಡದಂತೆ, ಕಲಂ 44(1)ರಂತೆ ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತಿ ಆದೇಶ ಮಾಡಿ ಆದೇಶಿಸಿದೆ. ಈ ಆದೇಶದ ಬಗ್ಗೆ ಪ್ರತಿವಾದಿಗಳು ಆಕ್ಷೇಪಣೆ / ವಿವರಣೆ ಸಲ್ಲಿಸಲು ಉದ್ದೇಶಿಸಿದಲ್ಲಿ ಈ ಆದೇಶವನ್ನು ಪಡೆದ ಒಂದು ತಿಂಗಳೊಳಗೆ ಆಕ್ಷೇಪಣೆ / ವಿವರಣೆ ಸಲ್ಲಿಸಲು ಸೂಚಿಸಿದೆ. ತಪ್ಪಿದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

**ಷೆಡ್ಯೂಲ್ ಸ್ವತ್ತು :–**

**ಸ್ಥಿರಾಸ್ತಿ:**

1) ಒಂದನೇ ಪ್ರತಿವಾದಿಯ ಹೆಸರಿನಲ್ಲಿರುವ ಬೆಂಗಳೂರು ಮಹಾನಗರ ಪಾಲಿಕೆ ಖಾತೆ ನಂ.498, ಆಸ್ತಿ ಗುರುತಿನ ಸಂಖ್ಯೆ 65–27–498, ಬಿ ಟಿ ಎಂ ಲೇಔಟ್ ವಾರ್ಡ ನಂ.65, ಬಿ ಟಿ ಎಂ 1ನೇ ಘಟ್ಟ, 2ನೇ ಹಂತ, ರಾಷ್ಟ್ರಕವಿ ಕುವೆಂಪುನಗರ, ಬೆಂಗಳೂರು ರಲ್ಲಿನ ಒಟ್ಟು 1200 ಚದರಡಿಯ ನಿವೇಶನರಲ್ಲಿನ 1600 ಚದರಡಿಯ ಕಟ್ಟಡ.

ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಈ ದಿನ, ದಿನಾಂಕ: 11–12–2014 ರಂದು ನನ್ನ ರುಜು ಹಾಗೂ ಕಛೇರಿಯ ಮೊಹರು ಸಹಿಯೊಂದಿಗೆ ನೀಡಲಾಗಿದೆ.

**P.R. 241**
**SC - 05**

ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

**ಶಿಕ್ಷಕರ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ**

**ಅಧಿಕೃತ ಜ್ಞಾಪನ**

**ಸಂ.ಎ1.ವೇತನ:ರಹಿತ:ರಜೆ:ಕ್ರಮ:21/2012–13 ದಿನಾಂಕ: 12–09–2014**

**ವಿಷಯ :** ಶ್ರೀಮತಿ:ಪುಷ್ಪರಾಣಿ.ಎಸ್.ಬಿ, ಡಿ.ದರ್ಜೆ ನೌಕರರು, ಶಿಕ್ಷಕರ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ರವರ ಅನಧಿಕೃತ ಗೈರುಹಾಜರಿ ಕುರಿತಾಗಿ ಅಂತಿಮ ದಂಡನಾ ಆದೇಶ:–

ಉಲ್ಲೇಖ :
1. ಶ್ರೀಮತಿ:ಪುಷ್ಪರಾಣಿ, ಡಿ.ದ.ನೌ ರವರ ಮನವಿ ದಿ: 31–07–2012, ಪತ್ರ ದಿ: 01–09–2012, ದಿ: 22–09–2012,
2. ಈ ಕಛೇರಿ ಪತ್ರ ಸಮ ಸಂಖ್ಯೆ ದಿನಾಂಕ: 17–08–2012, ಪತ್ರ ದಿ: 03–11–2012, ಪತ್ರ ದಿ: 28–12–2012, ಪತ್ರ ದಿ: 20–02–2013, ದಿ: 19–04–2013,
3. ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹೊಸದುರ್ಗ ತಾ: ರವರ ಕಛೇರಿ ಪ.ಸಂ: ಎ5.ವೇ.ರ.ಮ:ಸ್ವೀ.ಪ.ಜಾ.ವ.ಕ:/12–13 ದಿನಾಂಕ: 02–01–2013.
4. ಉಪ ನಿರ್ದೇಶಕರು, ಸಾ.ಶಿ.ಇಲಾಖೆ, ಚಿತ್ರದುರ್ಗ ಜಿಲ್ಲೆ ರವರ ಕಛೇರಿ ಪ.ಸಂ:ಇ3.ಸಿ.ಆರ್:ಹಿಂಬರಹ:01/2012–13 ದಿನಾಂಕ: 08–02–2013.
5. ಹೊಸ ದಿಗಂತ ದಿನ ಪತ್ರಿಕೆಯಲ್ಲಿ ಪತ್ರಿಕಾ ಪ್ರಕಟಣೆ ದಿ: 04–08–2013.
6. ಸರ್ಕಾರಿ ಆದೇಶ ಸಂಖ್ಯೆ:ಡಿ.ಪಿ.ಎ.ಆರ್:12ಎಸ್.ಡಿ.ಇ:2004 ದಿ: 03–06–2005.

ಶ್ರೀಮತಿ:ಪುಷ್ಪರಾಣಿ.ಎಸ್.ಬಿ ತಂದೆ ಬಸವರಾಜಪ್ಪ.ಎಸ್.ಬಿ, ರವರನ್ನು ಅನುಕಂಪದ ಆಧಾರದ ಮೇಲೆ ಡಿ.ದರ್ಜೆ ಹುದ್ದೆಗೆ ನೇಮಿಸಿ ಶಿಕ್ಷಕರ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯಕ್ಕೆ ನೇಮಿಸಿರುವಂತೆ, ದಿನಾಂಕ: 08–03–2012 ರಂದು ಅಪರಾಹ್ನ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ದಿನಾಂಕ: 01–08–2012 ರಿಂದ ದಿನಾಂಕ: 31–08–2012 ರವರೆಗೆ ವೇತನ ರಹಿತ ರಜೆ ಮಂಜೂರು ಮಾಡಲು ಕೋರಿ ಮನವಿ ಪ್ರಾಧಿಕಾರಯ ಮಂಜೂರಾತಿ ಪಡೆಯದೇ ಟಪಾಲು ವಿಭಾಗಕ್ಕೆ ನೀಡಿ ರಜೆಯ ಮೇಲೆ ತೆರಳಿದ ಸದರಿ ನೌಕರಳು ನಂತರ ದಿನಾಂಕ: 01–09–2012 ರಂದು ಕರ್ತವ್ಯಕ್ಕೆ ಹಾಜರಾಗಿ 02 ದಿನ ಕಾರ್ಯನಿರ್ವಹಿಸಿ ತರುವಾಯ ದಿನಾಂಕ: 03–09–2012 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಈ ಕುರಿತಾಗಿ ಕಛೇರಿಯ ಉಲ್ಲೇಖ(2) ರ ದಿ: 17–08–2012, ದಿ: 03–11–2012 ಹಾಗೂ 28–12–2012 ರ ಪತ್ರಗಳಲ್ಲಿ ಕರ್ತವ್ಯಕ್ಕೆ ಹಾಜರಾಗಲು ತಿಳಿಸಿ ನೊಂದಣಿ ಅಂಚೆ ಮೂಲಕ ಪತ್ರಗಳನ್ನು ಕಳುಹಿಸಿದ್ದಾಗ್ಯೂ ಸಹ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ನಂತರ ಕರ್ತವ್ಯಕ್ಕೆ ಹಾಜರಾಗಲು ಅಂತಿಮ ತಿಳುವಳಿಕೆ ಪತ್ರವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹೊಸದುರ್ಗ ತಾಲ್ಲೂಕು ರವರ ಮುಖೇನ ದಿ: 20–02–2013 ರ ಪತ್ರದಂತೆ ಕಳುಹಿಸಿದ್ದಾಗ್ಯೂ ಸಹ ಪತ್ರವನ್ನು ಸದರಿ ನೌಕರರು ಸ್ವೀಕರಿಸಿರುವುದಿಲ್ಲ. ಬದಲಾಗಿ ಸದರಿ ನೌಕರಳ ತಂದೆ ಶ್ರೀ.ಎಸ್.ಬಿ.ಬಸವರಾಜಪ್ಪ ರವರು ಸ್ವೀಕರಿಸಿದ್ದಾರೆ. ಆದಾಗ್ಯೂ ಕರ್ತವ್ಯಕ್ಕೆ ಹಾಜರಾಗುವ ಅಥವಾ ಅನಧಿಕೃತ ಗೈರು ಹಾಜರಿಗೆ ಸಮಜಾಯಿಷಿ ಸಲ್ಲಿಸುವ ಪ್ರಯತ್ನ ಮಾಡದೇ ಸದರಿ ನೌಕರರು ಕರ್ತವ್ಯ ನಿರ್ಲಕ್ಷ್ಯತೆ ತೋರಿರುತ್ತಾರೆ.

ಈ ಪ್ರಕರಣದಡಿ ಮುಂದುವರೆದು, ಕ್ರಮವಹಿಸುವ ಸಂಬಂಧವಾಗಿ ಪತ್ರ ದಿನಾಂಕ: 04–08–2013 ರಂತೆ ಕರ್ತವ್ಯಕ್ಕೆ ಹಾಜರಾಗಲು ತಿಳಿಸಿ ಪತ್ರಿಕಾ ಪ್ರಕಟಣೆಯನ್ನು ಹೊಸದಿಗಂತ ದಿನಪತ್ರಿಕೆಯಲ್ಲಿ ನೀಡಲಾಗಿರುತ್ತದೆ. ಆದಾಗ್ಯೂ ಈವರೆಗೆ ಕರ್ತವ್ಯಕ್ಕೆ ಹಾಜರಾಗದೇ ಇರುವುದು ಸದರಿ ನೌಕರರ ಕರ್ತವ್ಯಲೋಪವಾಗಿರುತ್ತದೆ.

ಈ ನೌಕರಳನ್ನು ದೀರ್ಘಾವಧಿ ಅನಧಿಕೃತ ಗೈರು ಹಾಜರಿ ಅವಧಿಯಲ್ಲಿ ಅಮಾನತ್ತು ಗೊಳಿಸಿದರೆ, 50% ವೇತನವನ್ನು ಜೀವನಾಧಾರ ಭತ್ಯೆ ರೂಪದಲ್ಲಿ ನೀಡಬೇಕಾಗುತ್ತದೆ ಎಂಬ ಕಾರಣದ ಅಮಾನತ್ತುಗೊಳಿಸಿರುವುದಿಲ್ಲ. ಮೂರು ಭಾರಿ ಕರ್ತವ್ಯಕ್ಕೆ ಹಾಜರಾಗಲು ನೋಟೀಸ್ ಜಾರಿಮಾಡಿದ್ದಾಗ್ಯೂ ಸಹ ಸದರಿ ನೌಕರರು ಕರ್ತವ್ಯಕ್ಕೆ ಹಾಜರಾಗದೇ ಇರುವುದರಿಂದ ನೌಕರರ ಮೇಲಿನ ಅನಧಿಕೃತ ಗೈರು ಹಾಜರಿ ಆರೋಪವು ಸಾಬೀತಾಗಿರುತ್ತದೆ.

ದಿ: 19–04–2013 ರಂದು ವಾರ್ತಾ ಇಲಾಖೆಗೆ ಪತ್ರ ಬರೆದು ಪ್ರಕಟಣೆ ನೀಡಿದ್ದಾಗ್ಯೂ ಸಮಜಾಯಿಷಿ ಉತ್ತರ ಸಲ್ಲಿಸದೇ ಇರುವುದರಿಂದ ದಿ: 03–09–2012 ರಿಂದ ಈವರೆಗೆ ಕಛೇರಿ/ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಹಾಜರಿಯಾಗಿರುವ ಆರೋಪ ಸಾಬೀತಾಗಿರುತ್ತದೆ. ಪತ್ರಿಕೆಯಲ್ಲಿ ಪ್ರಕಟವಾದ ದಿನಾಂಕದಿಂದ 15 ದಿನದೊಳಗೆ ಅಂತಿಮ ರಕ್ಷಣಾ ಹೇಳಿಕೆ ನೀಡಬೇಕಾಗಿರುತ್ತದೆ. ಹೇಳಿಕೆ ನೀಡಲು ತಪ್ಪಿದಲ್ಲಿ ಅನಧಿಕೃತ ಗೈರು ಹಾಜರಿ ಆರೋಪ ಒಪ್ಪಿಕೊಂಡಿರುವುದಾಗಿ ಭಾವಿಸಿ ಚಾಲ್ತಿ ನಿಯಮಗಳನ್ವಯ ಕ್ರಮ ಜರುಗಿಸಬೇಕಾಗಿರುತ್ತದೆ. ಅದರಂತೆ, ದಿ: 04–08–2013 ರಂದು ಪ್ರಕಟವಾದ ಹೊಸ ದಿಗಂತ ದಿನಪತ್ರಿಕೆಯಲ್ಲಿ ಪ್ರಕಟಣೆ ನೀಡಲಾಗಿರುತ್ತದೆ. ಪ್ರಕಟಿತ ದಿನಾಂಕದಿಂದ ಈವರೆಗೂ ಯಾವುದೇ ಉತ್ತರ ಸಲ್ಲಿಸಿರುವುದಿಲ್ಲ. ಹಾಗೂ ಕಛೇರಿ ಕೆಲಸಕ್ಕೆ ಹಾಜರಿ ಸಹ ಆಗಿರುವುದಿಲ್ಲ. ಆದ್ದರಿಂದ ಸೇವೆಗೆ ಸೇರಿ 02 ವರ್ಷ ಖಾಯಂ ಪೂರ್ವ ಸೇವಾವಧಿ ಘೋಷಣೆಗೆ ಮುಂಚಿತವಾಗಿಯೆ, ಸದರಿ ನೌಕರಳು ದೀರ್ಘಕಾಲದ ಅಂದರೆ ಒಂದು ವರ್ಷ 10 ತಿಂಗಳುಗಳ ಕಾಲ ಅನಧಿಕೃತ ಗೈರುಯಾಗಿರುವ ಕಾರಣದ ಮೇಲೆ ಶ್ರೀಮತಿ:ಪುಷ್ಪರಾಣಿ, ಡಿ.ದರ್ಜೆ ನೌಕರಳು ರವರ ಕರ್ತವ್ಯಲೋಪ, ದುರ್ನಡತೆ ಹಾಗೂ ಕೆಲಸದಲ್ಲಿನ ಅಶ್ರದ್ಧೆಯ ಮೇಲೆ ಕೆ.ಸಿ.ಎಸ್.ಆರ್.1957.ರ ನಿ–108ಕ್ಕೆ ಅರ್ಹರನ್ನಾಗಿಸಿಕೊಂಡಿರುವ ಕಾರಣದ ಮೇಲೆ ಕೆ.ಸಿ.ಎಸ್.ಆರ್.[ಸಿಸಿಎ] 1957.ರ ನಿಯಮಗಳ ಅಡಿಯಲ್ಲಿ ಸರ್ಕಾರಿ ಆದೇಶ ದಿ: 03–06–05.ರಲ್ಲಿ ನೀಡಿದ ಅಧಿಕಾರದಂತೆ, ಹಾಗೂ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳ ಸುತ್ತೋಲೆ ದಿ: 30–06–05.ರಲ್ಲಿ ಸೂಚಿಸಿದಂತೆ, ನೀಡಿರುವ ಅಧಿಕಾರವನ್ನು ಚಲಾಯಿಸಿ ಸೇವೆಯಿಂದ ವಜಾಗೊಳಿಸಬಹುದಾದ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ :–**

ಶ್ರೀ.ಡಿ.ಕೆ.ಶಿವಕುಮಾರ್, ಪ್ರಾಂಶುಪಾಲರು ಹಾಗೂ ಪದನಿಮಿತ್ತ ಸಹ ನಿರ್ದೇಶಕರು, ಶಿಕ್ಷಕರ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ಆದ ನಾನು ಉಲ್ಲೇಖ(6) ರಂತೆ ನನಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀಮತಿ:ಪುಷ್ಪರಾಣಿ.ಎಸ್.ಬಿ, ಡಿ.ದರ್ಜೆ ನೌಕರಳು, ಶಿಕ್ಷಕರ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ರವರು ಶಾಲಾ ಕೆಲಸಕ್ಕೆ (01–08–2012.ರಿಂದ ದಿ: 31–08–2012 ಹಾಗೂ ದಿನಾಂಕ: 03–09–2012 ರಿಂದ ಈವರೆಗೆ) ದೀರ್ಘಕಾಲದ ಅನಧಿಕೃತ ಗೈರು ಹಾಜರಿಯಾಗಿರುವ ಕಾರಣದ ಮೇಲೆ ಕೆ.ಸಿ.ಎಸ್.ಆರ್.(ಸಿಸಿಎ)–1957ರ ನಿಯಮ– 8(Viii)ರಂತೆ ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಿ ಆದೇಶಿಸಿದೆ.

ಸದರಿ ನೌಕರರ ಅನಧಿಕೃತ ಗೈರು ಹಾಜರಿ ಅವಧಿಯನ್ನು ಕೆ.ಸಿ.ಎಸ್.ಆರ್.–1957.ರ ನಿಯಮ–8(14)(ಎ)ರಂತೆ **"Dies non"** ಎಂದು ಪರಿಗಣಿಸಿ ಆದೇಶಿಸಿದೆ.

**ಡಿ.ಕೆ.ಶಿವಕುಮಾರ್**
ಪ್ರಾಂಶುಪಾಲರು ಹಾಗೂ ಪದನಿಮಿತ್ತ ಸಹ ನಿರ್ದೇಶಕರು
ಶಿಕ್ಷಕರ ಸರ್ಕಾರಿ ಶಿಕ್ಷಣ ಮಹಾವಿದ್ಯಾಲಯ
ಚಿತ್ರದುರ್ಗ ಜಿಲ್ಲೆ

**P.R. 226**
**SC - 10**

## ನಗರಾಭಿವೃದ್ಧಿ ಸಚಿವಾಲಯ
## ಅಧಿಸೂಚನೆ

**ಸಂಖ್ಯೆ:ನಅಇ 350 ಬೆಮಪ್ರಾ 2014 ಬೆಂಗಳೂರು, ದಿನಾಂಕ: 30-01-2015**

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 5 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಬಾಗಲಕೋಟೆ ಜಿಲ್ಲೆ ಕೆರೂರ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶಕ್ಕೆ ಹಾಲಿ ಭೂ ಉಪಯೋಗವನ್ನು ಗುರುತಿಸಲು ದಿನಾಂಕ: 01-10-2014 ರಿಂದ ಜಾರಿಗೆ ಬರುವಂತೆ ನಿರ್ಧರಿಸಿ ಈ ಮೂಲಕ ಘೋಷಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ರಾಜೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

**P.R-306**
**S.C-50**

## ಕಂದಾಯ ಇಲಾಖೆ
## ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಜಿಲ್ಲೆ ಮಂಡ್ಯ
## ಅಧಿಸೂಚನೆ

**ಸಂ.ಸಿಬ್ಬಂದಿ(1)ಸಿಆರ್:79/2013-14. ದಿನಾಂಕ: 05-12-2013.**

**ವಿಷಯ :** ಜಿಲ್ಲಾ ಕೇಂದ್ರದಲ್ಲಿರುವ ತಾಲ್ಲೂಕು ಕಛೇರಿಗಳಿಗೆ 03 **ಕಂದಾಯ ನಿರೀಕ್ಷಕರ ಹುದ್ದೆ ಮತ್ತು 03 ಗ್ರಾಮ ಲೆಕ್ಕಾಧಿಕಾರಿ ಹುದ್ದೆ**ಗಳನ್ನು ಸೃಜಿಸಿರುವ ಬಗ್ಗೆ.

**ಉಲ್ಲೇಖ :**
1. ಸರ್ಕಾರದ ಆದೇಶ ಸಂ:ಕಂಇ:666:ಎಎಸ್‌ಡಿ:2012 (ಭಾಗ) ದಿನಾಂಕ: 04-07-2013.
2. ಈ ಕಛೇರಿಯ ಅಧಿಕೃತ ಜ್ಞಾಪನ ಪತ್ರ ಸಂ:ಸಿಬ್ಬಂದಿ(1)ಸಿಆರ್:20/2013-14 ದಿನಾಂಕ: 07-10-2013.
3. ಈ ಕಛೇರಿಯ ಸಮ ಸಂಖ್ಯೆ ಆದೇಶ ದಿನಾಂಕ: 18-11-2013.
4. ಸಲಹಾ ಸಮಿತಿಯ ನಡವಳಿ ದಿನಾಂಕ: 05-12-2013.
5. ತಹಸೀಲ್ದಾರ್ ಮಂಡ್ಯ ರವರ ಪತ್ರ ಸಂಖ್ಯೆ:ಸಿಬ್ಬಂದಿ:ಸಿಆರ್:58/2013-14 ದಿನಾಂಕ: 22-10-2013.

ಸರ್ಕಾರವು ಕಂದಾಯ ಇಲಾಖೆಯಡಿ ಹಲವು ಯೋಜನೆಗಳನ್ನು ಜಾರಿಗೆ ತಂದಿದ್ದು, ಅವುಗಳ ಅನುಷ್ಠಾನದ ಜೊತೆಗೆ ಸಾರ್ವಜನಿಕ ಮತ್ತು ಇಲಾಖೆಯ ಕೆಲಸ ಕಾರ್ಯಗಳ ಒತ್ತಡ ಹೆಚ್ಚಾಗಿರುವ ಕಾರಣದಿಂದ, ಭೌಗೋಳಿಕವಾಗಿ ಮತ್ತು 2011ರ ಜನಸಂಖ್ಯೆಗೆ ಅನುಗುಣವಾಗಿ ಮಂಡ್ಯ ನಗರಕ್ಕೆ ಹೊಂದಿಕೊಂಡಿರುವ ಮಂಡ್ಯ ತಾಲ್ಲೂಕು ಕಸಬಾ ಹೋಬಳಿ/ ಕೊತ್ತತ್ತಿ-1/ಕೊತ್ತತ್ತಿ-2/ದುದ್ದ-2 ರ ಹೋಬಳಿಗಳನ್ನು ಆಡಳಿತಾತ್ಮಕ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ವಿಭಜಿಸುವುದು ಅವಶ್ಯವೆಂದು ತೀರ್ಮಾನಿಸಿ, ಮಂಡ್ಯ ತಾಲ್ಲೂಕು ತಹಸೀಲ್ದಾರ್ ರವರಿಂದ ಉಲ್ಲೇಖ(5)ರಂತೆ ಗ್ರಾಮಗಳ ವಿವರ ಮತ್ತು ತಾಲ್ಲೂಕು ನಕ್ಷೆಯೊಂದಿಗೆ ವರದಿಯನ್ನು ಪಡೆದು, ಉಲ್ಲೇಖ(3)ರ ಆದೇಶದ ಮೂಲಕ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಲಾಗಿರುವ ಸಲಹಾ ಸಮಿತಿಯು ಸಲ್ಲಿಸಿರುವ ನಡವಳಿಯನ್ನು ಪರಿಶೀಲನೆ ಮಾಡಲಾಗಿದೆ.

ಸರ್ಕಾರದ ಉಲ್ಲೇಖ (1)ರ ಆದೇಶದ ಮೂಲಕ ಮಂಡ್ಯ ಜಿಲ್ಲೆ ಮಂಡ್ಯ ತಾಲ್ಲೂಕಿಗೆ ಮಂಜೂರು ಮಾಡಿ ಸೃಜಿಸಿರುವ **03 ಕಂದಾಯ ನಿರೀಕ್ಷಕರ ವೃತ್ತ ಮತ್ತು 03 ಗ್ರಾಮ ಲೆಕ್ಕಾಧಿಕಾರಿ ವೃತ್ತ**ಗಳನ್ನು ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ ಕಲಂ 4 ಮತ್ತು 5 ಹಾಗೂ ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 3ರ ಪ್ರಕಾರ, ವಿಭಜಿಸಲು ತೀರ್ಮಾನಿಸಲಾಗಿದೆ. ವಿಭಜಿಸಲು ಉದ್ದೇಶಿಸಿರುವ ಹೋಬಳಿ ಮತ್ತು ಗ್ರಾಮಲೆಕ್ಕಿಗ ವೃತ್ತಗಳ ಸಂಬಂಧ ಕರ್ನಾಟಕ ಭೂ ಕಂದಾಯ ಅಧಿನಿಯಮ 1964 ರ ಕಲಂ 6 ಹಾಗೂ ಕರ್ನಾಟಕ ಭೂ ಕಂದಾಯ ನಿಯಮಗಳು 1966ರ ನಿಯಮ 3 ಮತ್ತು 4(v) 3(vi) ರ ಪ್ರಕಾರ ಸಾರ್ವಜನಿಕ ಆಕ್ಷೇಪಣೆಗಾಗಿ ಈ ಅಧಿಸೂಚನೆಯನ್ನು ಹೊರಡಿಸಲಾಗಿದೆ. ಸಾರ್ವಜನಿಕರಿಂದ ಅಥವಾ ಆಸಕ್ತರಿಂದ ಯಾವುದಾದರೂ ಆಕ್ಷೇಪಣೆಗಳು ಇದ್ದಲ್ಲಿ ಆಕ್ಷೇಪಣೆಗೆ ಪೂರಕವಾದಂತಹ ಕಾನೂನುಬದ್ಧ ದಾಖಲೆಗಳೊಡನೆ ಈ ಪ್ರಕಟಣೆ ದಿನಾಂಕದಿಂದ 15 ದಿನದೊಳಗಾಗಿ, **"ಜಿಲ್ಲಾಧಿಕಾರಿ ಮಂಡ್ಯ"** ಇವರಿಗೆ ಲಿಖಿತವಾಗಿ ಸಲ್ಲಿಸತಕ್ಕದ್ದು. ನಿಗಧಿತ ಅವಧಿಯೊಳಗೆ ಆಕ್ಷೇಪಣೆಗಳು ಬಾರದಿದ್ದಲ್ಲಿ ಈ ಅಧಿಸೂಚನೆಯನ್ನು ಖಾಯಂಗೊಳಿಸಲಾಗಿದೆ ಎಂದು ಭಾವಿಸುವುದು.

**ಮಂಡ್ಯ ತಾಲ್ಲೂಕು: ವಿಭಜಿಸಿರುವ ರಾಜಸ್ವ ನಿರೀಕ್ಷಕರ ವೃತ್ತಗಳು.**

| **ಹಾಲಿ ಇರುವುದು** | **ಹೊಸದಾಗಿ ರಚಿಸುವುದು** |
|---|---|
| **ಕಸಬಾ-1** | **ಕಸಬಾ-3 (ಕೇಂದ್ರಸ್ಥಾನ-ಸಾತನೂರು)** |
| **1. ಮಂಡ್ಯ.**<br>**2. ಗೋಪಾಲಪುರ.**<br>3. ಕೊಮ್ಮೇರಹಳ್ಳಿ. (ಕಸಬಾ 3ನೇ ವೃತ್ತಕ್ಕೆ ಸೇರ್ಪಡೆ)<br>4. ಸಾತನೂರು. (ಕಸಬಾ 3ನೇ ವೃತ್ತಕ್ಕೆ ಸೇರ್ಪಡೆ) | 1. ಕೊಮ್ಮೇರಹಳ್ಳಿ. (ಕಸಬಾ 1ನೇ ವೃತ್ತದಿಂದ)<br>2. ಸಾತನೂರು. (ಕಸಬಾ 1ನೇ ವೃತ್ತದಿಂದ)<br>3. ಉಮ್ಮಡಹಳ್ಳಿ (ಕಸಬಾ 2ನೇ ವೃತ್ತದಿಂದ) |
| **ಕಸಬಾ-2 (ಕೇಂದ್ರಸ್ಥಾನ-ಹನಕೆರೆ)** | **ಕೊತ್ತತ್ತಿ-3 (ಕೇಂದ್ರಸ್ಥಾನ-ತಗ್ಗಹಳ್ಳಿ)** |
| **1. ಬಿ.ಗೌಡಗೆರೆ.**<br>**2. ಹನಕೆರೆ.** | 1. ಬೇಲೂರು. (ಕೊತ್ತತ್ತಿ 2ನೇ ವೃತ್ತದಿಂದ)<br>2. ಸೂನಗಹಳ್ಳಿ. (ಕೊತ್ತತ್ತಿ 2ನೇ ವೃತ್ತದಿಂದ) |

| ಹಾಲಿ ಇರುವುದು | ಹೊಸದಾಗಿ ರಚಿಸುವುದು |
|---|---|
| **3. ಕನ್ನಲಿ.**<br>**4. ಬೂದನೂರು.**<br>5. ಉಮ್ಮಡಹಳ್ಳಿ(ಕಸಬಾ 3ನೇ ವೃತ್ತಕ್ಕೆ ಸೇರ್ಪಡೆ) | 3. ಮಂಗಲ. (ಕೊತ್ತತ್ತಿ 2ನೇ ವೃತ್ತದಿಂದ)<br>4. ತಗ್ಗಹಳ್ಳಿ. (ಕೊತ್ತತ್ತಿ 2ನೇ ವೃತ್ತದಿಂದ) |
| | **ಕೊತ್ತತ್ತಿ–4 (ಕೇಂದ್ರಸ್ಥಾನ–ಇಂಡುವಾಳು)** |
| | 1. ಇಂಡವಾಳು. (ಕೊತ್ತತ್ತಿ 1ನೇ ವೃತ್ತದಿಂದ)<br>2. ಕ್ಯಾತುಂಗೆರೆ. (ಕೊತ್ತತ್ತಿ 1ನೇ ವೃತ್ತದಿಂದ)<br>3. ಕಿರಗಂದೂರು. (ದುದ್ದ 2ನೇ ವೃತ್ತದಿಂದ)<br>4. ಬೇವಿನಹಳ್ಳಿ. (ಕೊತ್ತತ್ತಿ 1ನೇ ವೃತ್ತದಿಂದ) |
| **ಕೊತ್ತತ್ತಿ–1 (ಕೇಂದ್ರಸ್ಥಾನ–ಕೊತ್ತತ್ತಿ)** | |
| 1. ಕೊತ್ತತ್ತಿ.<br>2. ಕಾಳೇನಹಳ್ಳಿ.<br>3. ಉರಮಾರಕಸಲಗೆರೆ<br>4. ಎಲೆಚಾಕನಹಳ್ಳಿ.<br>5. ಇಂಡುವಾಳು (ಕೊತ್ತತ್ತಿ 4ನೇ ವೃತ್ತಕ್ಕೆ ಸೇರ್ಪಡೆ)<br>6. ಕ್ಯಾತುಂಗೆರೆ (ಕೊತ್ತತ್ತಿ 4ನೇ ವೃತ್ತಕ್ಕೆ ಸೇರ್ಪಡೆ)<br>7. ಬೇವಿನಹಳ್ಳಿ (ಕೊತ್ತತ್ತಿ 4ನೇ ವೃತ್ತಕ್ಕೆ ಸೇರ್ಪಡೆ) | – |
| **ಕೊತ್ತತ್ತಿ–2 (ಕೇಂದ್ರಸ್ಥಾನ–ಗುತ್ತಲು)** | |
| **1. ಸಂತೆಕಸಲಗೆರೆ.**<br>2. ಬೇಲೂರು. (ಕೊತ್ತತ್ತಿ 3ನೇ ವೃತ್ತಕ್ಕೆ ಸೇರ್ಪಡೆ)<br>3. ಸೂನಗಹಳ್ಳಿ. (ಕೊತ್ತತ್ತಿ 3ನೇ ವೃತ್ತಕ್ಕೆ ಸೇರ್ಪಡೆ)<br>4. ಮಂಗಲ. (ಕೊತ್ತತ್ತಿ 3ನೇ ವೃತ್ತಕ್ಕೆ ಸೇರ್ಪಡೆ)<br>5. ತಗ್ಗಹಳ್ಳಿ. (ಕೊತ್ತತ್ತಿ 3ನೇ ವೃತ್ತಕ್ಕೆ ಸೇರ್ಪಡೆ)<br>**6. ಗುತ್ತಲ.**<br>7. **ಚೀರನಹಳ್ಳಿ.** | – |
| **ದುದ್ದ–2** | |
| **1. ಗಾಣದಾಳು.**<br>**2. ಹೊಳಲು.**<br>**3. ಶಿವಳ್ಳಿ.**<br>**4. ಹೆಚ್.ಮಲ್ಲಿಗೆರೆ.**<br>**5. ಚಂದಗಾಲು.**<br>6. ಕಿರಗಂದೂರು.(ಕೊತ್ತತ್ತಿ 4ನೇ ವೃತ್ತಕ್ಕೆ ಸೇರ್ಪಡೆ) | |

**ಮಂಡ್ಯ ತಾಲ್ಲೂಕು: ವಿಭಜಿಸಿರುವ ಗ್ರಾಮ ಲೆಕ್ಕಿಗ ವೃತ್ತಗಳು**

| ಕಸಬಾ ಹೋಬಳಿ–1 | ಕಸಬಾ ಹೋಬಳಿ–1 |
|---|---|
| **ವೃತ್ತದ ಹೊಸ ಹೆಸರು: ಮಂಡ್ಯ–1** | **ಹೊಸ ವೃತ್ತದ ಹೆಸರು: ಮಂಡ್ಯ–2** |
| ಗ್ರಾಮಲೆಕ್ಕಿಗ ವೃತ್ತಕ್ಕೆ ಸೇರಿದ ಗ್ರಾಮಗಳು. | ಗ್ರಾಮಲೆಕ್ಕಿಗ ವೃತ್ತಕ್ಕೆ ಸೇರಿದ ಕರ್ತವ್ಯಗಳು. |
| **1. ಮಂಡ್ಯ.**<br>2. ಪಣಕನಹಳ್ಳಿ.<br>3. ತಂಡಸನಹಳ್ಳಿ(ದಾ).<br>4. ಚಿಂದಗಿರಿದೊಡ್ಡಿ(ದಾ).<br>**5.** ಕೋಣನಹಳ್ಳಿ(ದಾ). | ಮಂಡ್ಯ ವೃತ್ತಕ್ಕೆ ಸಂಬಂಧಿಸಿದ ಸಕಾಲ ಯೋಜನೆಯ ಎಲ್ಲಾ ವಿಧವಾದ ದೃಢೀಕರಣ ಪತ್ರಗಳ ಬಗ್ಗೆ ವರದಿ ಮತ್ತು ತಹಸೀಲ್ದಾರ್‌ರವರು ಸೂಚಿಸುವ ಇತರೆ ಕೆಲಸಗಳು. |

| ಕೊತ್ತತ್ತಿ ಹೋಬಳಿ–3 | ಕೊತ್ತತ್ತಿ ಹೋಬಳಿ–3 |
|---|---|
| **ವೃತ್ತದ ಹೊಸ ಹೆಸರು: ಗುತ್ತಲು–1** | **ಹೊಸ ವೃತ್ತದ ಹೆಸರು: ಗುತ್ತಲು–2** |
| ಗ್ರಾಮಲೆಕ್ಕಿಗ ವೃತ್ತಕ್ಕೆ ಸೇರಿದ ಗ್ರಾಮಗಳು. | ಗ್ರಾಮಲೆಕ್ಕಿಗ ವೃತ್ತಕ್ಕೆ ಸೇರಿದ ಕರ್ತವ್ಯಗಳು. |
| 1. **ಗುತ್ತಲು.**<br>2. ಚನ್ನಪ್ಪನದೊಡ್ಡಿ(ದಾ)<br>3. ಚಿಕ್ಕೇಗೌಡನದೊಡ್ಡಿ(ದಾ)<br>4. ಮರಕಾಡುದೊಡ್ಡಿ(ದಾ)<br>5. ಯತ್ತಗದಹಳ್ಳಿ(ದಾ) | ಗುತ್ತಲು ಗ್ರಾಮಕ್ಕೆ ಸಂಬಂಧಿಸಿದ ಸಕಾಲ ಯೋಜನೆಯ ಎಲ್ಲಾ ವಿಧವಾದ ದೃಢೀಕರಣ ಪತ್ರಗಳ ಬಗ್ಗೆ ವರದಿ ಮತ್ತು ತಹಸೀಲ್ದಾರ್‌ರವರು ಸೂಚಿಸುವ ಇತರೆ ಕೆಲಸಗಳು. |
| **ಕೊತ್ತತ್ತಿ ಹೋಬಳಿ–3** | **ಕೊತ್ತತ್ತಿ ಹೋಬಳಿ–3** |
| **ಗ್ರಾಮ ಲೆಕ್ಕಿಗ ವೃತ್ತದ ಹೊಸ ಹೆಸರು: ಸಂತೆಕಸಲಗೆರೆ–1** | **ಗ್ರಾಮ ಲೆಕ್ಕಿಗ ವೃತ್ತದ ಹೊಸ ಹೆಸರು: ಸಂತೆಕಸಲಗೆರೆ–2** |
| ಗ್ರಾಮಲೆಕ್ಕಿಗ ವೃತ್ತಕ್ಕೆ ಸೇರಿದ ಗ್ರಾಮಗಳು. | ಗ್ರಾಮಲೆಕ್ಕಿಗ ವೃತ್ತಕ್ಕೆ ಸೇರಿದ ಕರ್ತವ್ಯಗಳು. |
| 1. ಸಂತೆಕಸಲಗೆರೆ.<br>2. ಕಾರಸವಾಡಿ(ದಾ)<br>3. ಹನಿಯಂಬಾಡಿ(ದಾ) | ಗ್ರಾಮಲೆಕ್ಕಿಗ ವೃತ್ತಕ್ಕೆ ಸಂಬಂಧಿಸಿದ ಸಕಾಲ ಯೋಜನೆಯ ಎಲ್ಲಾ ವಿಧವಾದ ದೃಢೀಕರಣ ಪತ್ರಗಳ ಬಗ್ಗೆ ವರದಿ ಮತ್ತು ತಹಸೀಲ್ದಾರ್‌ರವರು ಸೂಚಿಸುವ ಇತರೆ ಕೆಲಸಗಳು. |

**ಜಿಲ್ಲಾಧಿಕಾರಿ**
**ಮಂಡ್ಯ ಜಿಲ್ಲೆ, ಮಂಡ್ಯ.**

P.R-307
SC-05

## ನಗರಾಭಿವೃದ್ಧಿ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ನಅಇ 121 ಬೆಂರೂಪ್ರಾ 2014 ಬೆಂಗಳೂರು, ದಿನಾಂಕ: 02–02–2015**

ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 121 ಬೆಂರೂಪ್ರಾ 2014, ದಿ: 22–11–2014ರ ಐದನೇ ಸಾಲಿನಲ್ಲಿ **"ಪರಿಷ್ಕೃತ ಸ್ಥಳೀಯ ಯೋಜನಾ ಪ್ರದೇಶ"** ಎಂಬುದರ ಬದಲಾಗಿ **"ಸ್ಥಳೀಯ ಯೋಜನಾ ಪ್ರದೇಶ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ವಿ. ರಾಜೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

P.R-308
S.C-50

## ಸಂಸದೀಯ ವ್ಯವಹಾರಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಸಂವ್ಯಶಾಇ 12 ಭಾನಿವಿ 2015 ಬೆಂಗಳೂರು, ದಿನಾಂಕ: 06–02–2015.**

**ವಿಷಯ:** ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2015 ರಲ್ಲಿರುವಂತೆ ಪ್ರಕಟಿಸುವ ಬಗ್ಗೆ.

**ಉಲ್ಲೇಖ :** ಭಾಷಾಂತರ ನಿರ್ದೇಶಕರ ಪತ್ರ ಸಂಖ್ಯೆ:ಭಾನಿ 1/ಆಡಳಿತ/ ಗ್ರೂಪ್–ಎ/ಜ್ಯೇಪಟ್ಟಿ/2015, ದಿನಾಂಕ: 06 ಮತ್ತು 12–01–2015

ಕರ್ನಾಟಕ ಸರ್ಕಾರಿ ನೌಕರರ(ಜ್ಯೇಷ್ಠತಾ) ನಿಯಮಗಳು, 1957ರ 10ನೇ ನಿಯಮದ(1)ನೇ ಉಪ–ನಿಯಮದನ್ವಯ ಭಾಷಾಂತರ ನಿರ್ದೇಶನಾಲಯದ ಗ್ರೂಪ್–ಎ ಅಧಿಕಾರಿಗಳ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ: 01–01–2015ರಲ್ಲಿರುವಂತೆ ಅನುಬಂಧದಲ್ಲಿ ಲಗತ್ತಿಸಿ ಪ್ರಕಟಿಸಿದೆ. ಸದರಿ ಜ್ಯೇಷ್ಠತಾ ಪಟ್ಟಿಯಿಂದ ಬಾಧಿತ ಅಭ್ಯರ್ಥಿಗಳಿಂದ ಆಕ್ಷೇಪಣೆ ಹಾಗೂ ಸಲಹೆಗಳು ಇದ್ದಲ್ಲಿ, ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳ ಇಲಾಖೆ, ಕೊಠಡಿ ಸಂಖ್ಯೆ:136, ಮೊದಲನೇ ಮಹಡಿ, ವಿಧಾನಸೌಧ, ಬೆಂಗಳೂರು ಇವರಿಗೆ ಸಲ್ಲಿಸಲು ಈ ಅಧಿಸೂಚನೆಯು ರಾಜ್ಯಪತ್ರದಲ್ಲಿ ಪ್ರಕಟಿತವಾದ ದಿನಾಂಕದಿಂದ 15 ದಿನಗಳ ಕಾಲಾವಕಾಶ ನೀಡಲಾಗಿದೆ.

ಅನುಬಂಧ

ದಿನಾಂಕ: 01-01-2015ರಲ್ಲಿ ಇರುವಂತೆ ಭಾಷಾಂತರ ನಿರ್ದೇಶನಾಲಯದ ಗ್ರೂಪ್-ಎ ಅಧಿಕಾರಿಗಳ ಕರಡು ಜ್ಯೇಷ್ಠತಾ ಪಟ್ಟಿ

| ಕ್ರ.ಸಂ | ಅಧಿಕಾರಿಯ ಹೆಸರು | ನೇರ ನೇಮಕಾತಿ/ಮುಂಬಡ್ತಿ ಇತರೆ | ಮೀಸಲಾತಿ/ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ/ಜ್ಯೇಷ್ಠಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |

ಗ್ರೂಪ್ ಎ

ನಿರ್ದೇಶಕರು (ರೂ.40050-1050-45300-1200-52500-1350-56550)

| | | | | | | | |
|---|---|---|---|---|---|---|---|
| 1 | ಖಾಲಿ ಹುದ್ದೆ | | | | | | |

ಉಪ ನಿರ್ದೇಶಕರು (ರೂ.36300-900-3000-1050-45300-1200-52500-1350-53850)

| | | | | | | | |
|---|---|---|---|---|---|---|---|
| 1. | ಐ.ಎಂ.ಕಂಬಳಿ | ಮುಂಬಡ್ತಿ | ಸಾಮಾನ್ಯ | 05-08-1958 | 14-06-1983 | 11-01-2012 | 11-01-2012 |
| 2. | ಜಿ. ಮಹದೇವ್ | ಮುಂಬಡ್ತಿ | ಸಾಮಾನ್ಯ | 17-05-1955 | 12-12-1983 | 06-11-2012 | 06-11-2012 |
| 3. | ಎಂ.ವೆಂಕಟೇಶ | ಮುಂಬಡ್ತಿ | ಪರಿಶಿಷ್ಟ ಜಾತಿ | 12-11-1968 | 25-01-1999 | 22-03-2014 | 22-03-2014 |

ಸಹಾಯಕ ನಿರ್ದೇಶಕರು (ರೂ.28100-700-28800-800-33200-900-39000-1050-45300-1200-50100)

| | | | | | | | |
|---|---|---|---|---|---|---|---|
| 1. | ಎಂ.ನಾರಾಯಣಸ್ವಾಮಿ | ಮುಂಬಡ್ತಿ | ಪರಿಶಿಷ್ಟ ಪಂಗಡ | 01-06-1972 | 13-11-2003 | 27-06-2012 | 27-06-2012 |
| 2. | ಕೆ.ಉಮಾಲಕ್ಷ್ಮಿ | ಮುಂಬಡ್ತಿ | ಪರಿಶಿಷ್ಟ ಜಾತಿ | 09-07-1970 | 25-01-1999 | 27-09-2012 | 27-09-2012 |
| 3. | ಜಿ.ಗಂಗರಾಜು | ಮುಂಬಡ್ತಿ | ಸಾಮಾನ್ಯ | 20-07-1973 | 25-01-1999 | 25-04-2014 | 25-04-2014 |
| 4 | ಡಿ.ಸ್ಮಿತಾ | ಮುಂಬಡ್ತಿ | ಸಾಮಾನ್ಯ | 14-07-1974 | 25-01-1999 | 11-08-2014 | 11-08-2014 |
| 5 | ಭಕ್ತರಾಜಪಾಟೀಲ್ | ಮುಂಬಡ್ತಿ | ಸಾಮಾನ್ಯ | 08-08-1971 | 25-01-1999 | 11-08-2014 | 11-08-2014 |
| 6 | ರಂಗನಾಥ | ಮುಂಬಡ್ತಿ | ಸಾಮಾನ್ಯ | 07-06-1969 | 25-01-1999 | 11-08-2014 | 11-08-2014 |

ಆಡಳಿತಾಧಿಕಾರಿ (ರೂ.28100-700-28800-800-33200-900-39000-1050-45300-1200-50100)

| | | | | | | | |
|---|---|---|---|---|---|---|---|
| 1 | ಖಾಲಿ ಹುದ್ದೆ | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

PR-310
SC-10

ಬಿ.ಜಿ.ಶ್ಯಾಮಲ
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಉಪ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಾರ್ಯಾಲಯ

**ವಿಷಯ:** ಸಮಾಪನೆಯಲ್ಲಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಹಾಗೂ ಮಾರಾಟಗಾರರ ಸಹಕಾರ ಸಂಘ ನಿ, ಮಾಳಪ್ಪನಹಟ್ಟಿ, ಚಿತ್ರದುರ್ಗ ತಾಲ್ಲೂಕು ಇದರ ನೋಂದಣಿ ರದ್ಧತಿ ಮಾಡುವ ಬಗ್ಗೆ.

**ಉಲ್ಲೇಖ :** 1. ಈ ಕಛೇರಿ ಆದೇಶ ಸಂಖ್ಯೆ/ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್-39/2010-11, ದಿನಾಂಕ: 31-01-2011.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪವಿಭಾಗ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಸನಿ/30/ಸಮಾಪನೆ/ ಸಿಆರ್/ /2014-15, ದಿನಾಂಕ: 31-12-2014.

**ಪ್ರಸ್ತಾವನೆ:-**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ಸಮಾಪನೆಯಲ್ಲಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಹಾಗೂ ಮಾರಾಟಗಾರರ ಸಹಕಾರ ಸಂಘ ನಿ, ಮಾಳಪ್ಪನಹಟ್ಟಿ, ಚಿತ್ರದುರ್ಗ ತಾಲ್ಲೂಕು ಇದರ ನೋಂದಣಿ ಸಂಖ್ಯೆ: ಸನಿ-30/729/ಆರ್‌ಜಿಎನ್/26122/1998-99, ದಿನಾಂಕ: 30-11-1998 ರಂದು ನೋಂದಣಿಯಾಗಿದ್ದು, ಸಂಘವು 2003-04 ರಿಂದ ಯಾವುದೇ ಕಾರ್ಯ ಚಟುವಟಿಕೆಗಳನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಉಲ್ಲೇಖ (1) ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, ಚಿತ್ರದುರ್ಗ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಿದ್ದು, ಸಮಾಪನಾಧಿಕಾರಿಗಳು ಸಂಘದ ಸದಸ್ಯರುಗಳಿಗೆ ಸಂಘದ ಪುನಃಶ್ಚೇತನದ ಬಗ್ಗೆ ಒಲವು ಇಲ್ಲದಿರುವುದನ್ನು ಮನಗಂಡು ದಿನಾಂಕ: 30-12-2014 ರಂದು ನಡೆಸಿರುವ ಸಮಾಪನಾಧಿಕಾರಿಗಳ ನಡವಳಿಕೆ ರೀತ್ಯಾ ಬರತಕ್ಕ ಆಸ್ತಿಗಳನ್ನು ನಷ್ಟಕ್ಕೆ

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಈ ಅಂಶವನ್ನು ಗಮನಿಸಿದಾಗ ಒಂದನೇ ಎದುರಿಗೆ ಜಾಮೀನು ಭದ್ರತೆ ನೀಡಿರುವ 2ನೇ ಎದುರಿಯವರು ಅರ್ಜಿದಾರ ಸಂಘದ ಸದಸ್ಯರಾಗದಿರುವುದನ್ನು ಗಮನಿಸಿದೆ. ಈ ಅಂಶವನ್ನು ಎದುರಿಯವರು ತಮ್ಮ ತಕರಾರು ಮತ್ತು ವಾದ ಮಂಡನೆಯಲ್ಲಿ ಪ್ರಸ್ತಾಪಿಸಿದ್ದರು ಸಹ ಅರ್ಜಿದಾರರು ಈ ಅಂಶದ ಬಗ್ಗೆ ತಮ್ಮ ಪ್ರತಿವಾದಿ ಅಥವಾ 2ನೇ ಎದುರಿಯವರು ಅರ್ಜಿದಾರ ಸಂಘದ ಸದಸ್ಯರಾಗಿರುತ್ತಾರೆ ಎಂಬ ಬಗ್ಗೆ ಯಾವುದೇ ದಾಖಲೆಗಳನ್ನು ನೀಡುವ ಮೂಲಕ ತಮ್ಮ ಅರ್ಜಿ ಕೋರಿಕೆಯನ್ನು ಪ್ರತಿಪಾದಿಸಿಲ್ಲದಿರುವುದನ್ನು ಗಮನಿಸಲಾಗಿದೆ. ಆದ್ದರಿಂದ, 2ನೇ ಎದುರಿಯು ಅರ್ಜಿದಾರ ಸಂಘದ ಸದಸ್ಯರಾಗಿಲ್ಲ ಎಂಬುದು ಸ್ಪಷ್ಟವಾಗಿ ದೃಢಪಟ್ಟಿರುತ್ತದೆ. ಸಹಕಾರ ಕಾಯ್ದೆಯಲ್ಲಿ ಸದಸ್ಯರಲ್ಲದವರ ಬಗ್ಗೆ ಅಧಿಭಾರ ಅಥವಾ ದಾವಾ ಅರ್ಜಿಯನ್ನು ದಾಖಲಿಸಲು ಅವಕಾಶವಿರುವುದಿಲ್ಲ. ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103 ರಲ್ಲಿನ ಅರ್ಜಿಯನ್ನು ಸಹ ಸದಸ್ಯರಲ್ಲದವರ ವಿರುದ್ಧ ಅರ್ಜಿ ಸಲ್ಲಿಸಲು ಅವಕಾಶವಿರುವುದಿಲ್ಲ.

ಈ ಮೇಲೆ ವಿವರಿಸಿದ ಅಂಶಗಳನ್ನು ಪರಿಶೀಲಿಸಿ ವಿಮರ್ಶಿಸಿದಾಗ ಕಲಂ 103 ರ ಅರ್ಜಿಯಲ್ಲಿನ ಕೋರಿಕೆ ಅರ್ಜಿದಾರ ಸಂಘದ ಸದಸ್ಯರಲ್ಲದ ಎರಡನೇ ಎದುರಿಯವರು, 1 ನೇ ಎದುರಿಗೆ ಜಾಮೀನು ಭದ್ರತೆ ನೀಡಿರುವುದು ಮತ್ತು ಜಾಮೀನು ಭದ್ರತೆ ಪಡೆಯುವಾಗ ಈ ಅಂಶವನ್ನು ಗಮನಿಸದಿರುವುದನ್ನು ಪರಿಗಣಿಸಿ ಅರ್ಜಿದಾರರ ಕಲಂ 103 ರ ಅರ್ಜಿ ಕೋರಿಕೆಯನ್ನು ತಿರಸ್ಕರಿಸಲು ತೀರ್ಮಾನಿಸಿದೆ. ಹಾಗೂ ಈ ನ್ಯಾಯಾಲಯದಿಂದ ಷರತ್ತು ಪೂರ್ವಕ ತೀರ್ಪು ಪೂರ್ವ ಜಪ್ತು ಆದೇಶದ ಸಂ.ಡಿಆರ್‌ಎಸ್/ಎಬಿಜೆ/01/ಕಲಂ–103/2013–14, ದಿನಾಂಕ:31–07–2013 ನ್ನು ರದ್ದುಪಡಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**: ಆದೇಶ :**

**ಸಂ:ಡಿಆರ್‌ಎಸ್/ಎಬಿಜೆ/01/ಕಲಂ–103/2013–14, ದಿನಾಂಕ:23–09–2014**

ಮೇಲಿನ ಕಂಡಿಕೆಗಳಲ್ಲಿ ವಿವರಿಸಿದ ಕಾರಣಗಳಿಗಾಗಿ, ಅರ್ಜಿದಾರ ಸಂಘವು ಕಾಯ್ದೆ ಕಲಂ 103 ರಡಿ ಸಲ್ಲಿಸಿದ ಅರ್ಜಿ ಕೋರಿಕೆಯನ್ನು ತಿರಸ್ಕರಿಸಿ ವಜಾಗೊಳಿಸಿದೆ. ಮತ್ತು ಈ ಕುರಿತು ನೀಡಿದ ಷರತ್ತು ಪೂರ್ವಕ ತೀರ್ಪು ಪೂರ್ವ ಜಪ್ತು ಆದೇಶ ಸಂ.ಡಿಆರ್‌ಎಸ್/ಎಬಿಜೆ/01/ಕಲಂ–103 2013–14, ದಿನಾಂಕ:31–07–2013 ರಂದು ಹೊರಡಿಸಿದ ಆದೇಶವನ್ನು ರದ್ದುಪಡಿಸಿ ಆದೇಶಿಸಿದೆ.

ಈ ಆದೇಶವನ್ನು ಈ ದಿನ, ದಿನಾಂಕ:23–09–2014 ರಂದು ತೆರೆದ ನ್ಯಾಯಾಲಯದಲ್ಲಿ ಉಚ್ಚರಿಸಲಾಗಿದೆ ಮತ್ತು ನನ್ನ ಸಹಿ ಮತ್ತು ನ್ಯಾಯಾಲಯದ ಮುದ್ರೆಯೊಂದಿಗೆ ಹೊರಡಿಸಲಾಗಿದೆ.

**ಡಾ:ಸುನೀತಾ ಸಿದ್ರಾಮ್**
ಸಹಕಾರ ಸಂಘಗಳ ಉಪನಿಬಂಧಕರು,
ಶಿವಮೊಗ ಜಿಲ್ಲೆ, ಶಿವಮೊಗ್ಗ.

**PR. 348**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59